# ಕೊಡಗು ಸಂಗಾತಿ

ಜುಲೈ 1 ರಿಂದ 31, 2004 ಪಾಕ್ಷಿಕ ಪತ್ರಿಕೆ (ಕಾರ್ತಿಂಗ 17-32 , ಆಟಿ 1-15 )

12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನ್‌ಕಲ್ಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ RNI No. : 10-01-96 TCI Kar. 09592 ಕನ್ನಡ ಮತ್ತು ಗೌಡ ಕನ್ನಡದಲ್ಲಿ ಪ್ರಕಟಿತ

KA / SK / MYS / 88 / 2003-05, ಸಂಪುಟ : 8 ಸಂಚಿಕೆ : 7-8 ಪುಟಗಳು : 24 ಬೆಲೆ : 12-00 ರೂ.





: ಲೇಖನ ಒಳಪುಟದಲ್ಲಿ

## *ಕೊಡಗು ಮತ್ತು ಮಂಗಳೂರು ಲೋಕ ಸಭಾ ಸದಸ್ಯ:*

## ದೇವರಗುಂಡ ಸದಾನಂದ ಗೌಡರು, ಘಟ್ಟದಿಂದ ಕರಾವಳಿ ತನಕ ಹಲವು ಮಜಲುಗಳಿಗೆ ಸ್ಪಂದಿಸಬೇಕಾಗಿರುವುದು ಅನಿವಾರ್ಯ



## ನವ ದಂಪತಿಗಳಿಗೆ ಹಾರ್ದಿಕ ಶುಭಾಶಯಗಳು

ಗೌಡ ಪದ್ಧತಿ ಪ್ರಕಾರ ನೀವುಗಳು ದಿನಾಂಕ 29-2-2004 ರಂದು ಸತಿಪತಿಗಳಾದಿರಿ. ನಿಮ್ಮ ಹೊಸ ಬಾಳ್ವೆಗೆ ನಾವುಗಳು ಶುಭವನ್ನು ಹಾರೈಸುವೆವು.

ಯಿಂದ : ಕಾನೆಹಿತ್ಲು ನಂಜಪ್ಪ, ಕಾನೆಹಿತ್ಲು ಲಲಿತ (ಚಿಮ್ಮಿ) ನಮಿತ ಶ್ರೀಧರ್ ಮಾವಂಜಿ, ನಳಿನಿರಾಯ್ ಪೊನ್ನಪ್ಪ ಕನ್ನಂಡ, ಭವಿಶ್ಯ ಶ್ರೀಧರ್ ಮಾವಂಜಿ ಮತ್ತು ರೋನಾ ರಾಯ್ ಪೊನ್ನಪ್ಪ. ಮತ್ತು ಚೊಂಡೀರ ಮೊಣ್ಣಪ್ಪ, ಚೊಂಡೀರ ಜಯಲಕ್ಷ್ಮಿ, ಚೊಂಡೀರ ವಿನುತ

ಚೊಂಡೀರ ಬಬಿತಾ ಮತ್ತು ಕಾನೆಹಿತ್ಲು ಪ್ರಸನ್ನ



## ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ (ರಿ)



(C/o ಕೊಡಗು ಗೌಡ ವಿದ್ಯಾರ್ಥಿನಿಲಯ, ಜಯಲಕ್ಷ್ಮಿಪುರಂ, ಮೈಸೂರು - 12) ವಿಶೇಷ ಪ್ರಕಟಣೆ

ನಮ್ಮ ಜನಾಂಗದಲ್ಲಿರುವ ಇಬ್ಬರು ಕಡು ಬಡವ ಅನಾಥ ಮಕ್ಕಳನ್ನು ಗುರುತಿಸಿ, ಅಂತಹವರನ್ನು ನಮ್ಮ ಈ ಮೇಲಿನ ಸಂಘದ ವತಿಯಿಂದ ವಿದ್ಯಾಭ್ಯಾಸ ನೀಡುವ ಉದ್ದೇಶವಿಟ್ಟುಕೊಂಡಿರುವುದರಿಂದ, ನಮ್ಮ ಜನಾಂಗದಲ್ಲಿ ಯಾವುದೇ ಪ್ರತಿಭಾವಂತ ಕಡು ಬಡವ ಅಥವಾ ಅನಾಥ ಮಕ್ಕಳಿದ್ದಲ್ಲಿ ಅಂತವರ ಹೆಸರು, ಮನೆ ಹೆಸರು, ತಂದೆ ಹೆಸರು, ಹಾಗೂ ಪೂರ್ತಿ ವಿವರ ಮತ್ತು ವಿಳಾಸದೊಂದಿಗೆ ನಮ್ಮ ಸಂಘದ ಕಾರ್ಯದರ್ಶಿಯವರಿಗೆ ಈ ಮೇಲ್ಕಂಡ ವಿಳಾಸಕ್ಕೆ ತಿಳಿಸಬೇಕೆಂದು ವಿನಂತಿಸುತ್ತೇವೆ. ಹೆಚ್ಚಿನ ಮಾಹಿತಿಗಾಗಿ ಅಧ್ಯಕ್ಷರು ಯಾ ಕಾರ್ಯದರ್ಶಿ ಇವರನ್ನು ಸಂಪರ್ಕಿಸುವುದು.

*-ಕೊಂಬಾರನ ಸುಬ್ಬಯ್ಯ, ಕಾರ್ಯದರ್ಶಿ, 0821/2302650, ತಡಿಯಪ್ಪನ ಕುಮಾರಜಯ, ಅಧ್ಯಕ್ಷರು, (0821/2363574*

ಶ್ರೀ ಐಯ್ಯಣ್ಣ ಮತ್ತು ಡಾ. ಕೆ. ಬಿ. ಜ್ಯೋತಿ



## ಅಮೆರಿಕಕ್ಕೆ ಪಯಣ

ಮೈಸೂರಿನ ನಿವಾಸಿಗಳಾದ ಶ್ರೀಮತಿ ಮತ್ತು ಶ್ರೀ ಕೂಡಕಂಡಿ ಲೀಲಾವತಿ ಮತ್ತು ಬಸಪ್ಪ ಇವರ ಮಗಳಾದ ಡಾ. ಕೆ. ಬಿ. ಜ್ಯೋತಿ M.B.B.S., D.L.O (E.N.T) ಇವರು ತನ್ನ ಪತಿಯೊಂದಿಗೆ ತಾ 9-6-2004 ರಂದು ಅಮೇರಿಕಕ್ಕೆ ಹೆಚ್ಚಿನ ವ್ಯಾಸಂಗಕ್ಕಾಗಿ ಪ್ರಯಾಣ ಮಾಡಿದರು. ಇವರ ಪತಿ ಶ್ರೀ ಐಯ್ಯಣ್ಣ (ಹರೀಶ್) ಅಮೇರಿಕದ New Jersy ಎಂಬಲ್ಲಿ Guardian Life ಎಂಬ ಕಂಪೆನಿಯಲ್ಲಿ ಸಾಫ್ಟ್‌ವೇರ್ ಇಂಜಿನಿಯರ್ ಆಗಿ ಕೆಲಸ ನಿರ್ವಹಿಸುತ್ತಿರುವರು.

*ಶುಭ ಹಾರೈಸುವ, ತಂದೆ, ತಾಯಿ, ಅಕ್ಕ ಪೂರ್ಣಿಮಾ, ಬಾವ ಅಪ್ಪಚ್ಚು, ಕರ್ನಾಟಕ ಬ್ಯಾಂಕಿನ ಮ್ಯಾನೇಜರ್, ತಂಗಿ ಡಾ. ಬಬಿತ ಮತ್ತು ಮೊಮ್ಮಗ ಶ್ರೀನಿಧಿ ಕೊಡಪಾಲ್*

## ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
## ಪರಾಧೀನಗೊಳಿಸಲು ವ್ಯವಸ್ಥಾಪಕ ಮಂಡಳಿ ನಿರ್ಧಾರ

ಕೊಡಗು ಸಂಗಾತಿ, ಪಾಕ್ಷಿಕ ಪತ್ರಿಕೆಯು ಈಗ್ಯೆ 1-4-1997 ರಿಂದ ನಿರಂತರವಾಗಿ ಜನಾಂಗದ ಮತ್ತು ಕೊಡಗು ನಾಡಿನ ಅಭಿವೃದ್ಧಿಯನ್ನು ಬಯಸಿ ಅನವರತ ಸೇವೆ ಸಲ್ಲಿಸಿದೆ. ಅನಿವಾರ್ಯ ಕಾರಣಗಳಿಂದ ಮುಂದುವರಿಸುವುದು ಕಠಿಣವಾಗಿದೆ. ಪತ್ರಿಕೆಯನ್ನು ಮುಂದುವರಿಸಲು ಇಚ್ಛಿಸುವ ಆಸಕ್ತರು ಸಂಪರ್ಕಿಸುವ ವಿಳಾಸ -ಪಟ್ಟಡ ಪ್ರಭಾಕರ, ಮೈಸೂರು,

*ದೂರವಾಣಿ : 0821-2404290 ಸಂಪರ್ಕಿಸುವ ಸಮಯ :* *- ಪಟ್ಟಡ ಶೀಲಾಮಣಿ, ಸಂಪಾದಕಿ.*
*ಬೆಳಿಗ್ಗೆ 8 ಘಂಟೆ ತನಕ : ಸಂಜೆ 8 ಘಂಟೆಯ ನಂತರ*

*ಕೊಡಗು ಸಂಗಾತಿ ಬರೆದ ಪುಟಗಳು ನೆನಪುಗಳು,*
*ಕೊಡಗು ಸಂಗಾತಿ ಬರೆಯದ ಪುಟಗಳು ಕನಸುಗಳು,*
*ಮಕ್ಕಳ ವಿದ್ಯಾಭ್ಯಾಸ, ಏಳಿಗೆಗಾಗಿ ತ್ಯಾಗ ಮಾಡುವುದು ಪೋಷಕರ ಪರಮ ಕರ್ತವ್ಯ.*
*ಮಕ್ಕಳು ಆ ತ್ಯಾಗದ ಅದೃಷ್ಟವನ್ನು ಅರಿತಾಗ ಅದುವೆ ಶ್ರೇಷ್ಠ ಕರ್ತವ್ಯ* *-ಪಟ್ಟಡ ಪ್ರಭಾಕರ*



# 2004, ಜುಲೈ 1 ರಿಂದ 31ರ ತನಕ






| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ ಮತ್ತು ಕೋರಿಯರ್ ಸರ್ವಿಸ್ ಇತ್ಯಾದಿ | **ಕೊಡಗು ಸಂಗಾತಿ,** 12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನಕಲ್ ಅಂಚೆ, ಮೈಸೂರು - 17. **ಫೋನ್:0821/2404290**<br>ಕುಂಟುಪುಣಿ ರಾಮಕೃಷ್ಣ, ಕಾವೇರಿ ಆಟೋಮೊಬೈಲ್, ರಿಂಗ್‌ರೋಡ್ ಸರ್ಕಲ್, ಹಿನಕಲ್ ಅಂಚೆ, ಮೈಸೂರು - 17 **Mobile : 94483-90855** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ : ಚಿಪ್ಪೆ, ಹುಸೆಮಣೆ ಪುಸ್ತಕ / ಚಾಂಪಾ ಶುಭಾಶಯ ಕಾರ್ಡ್ಸ್ / ಕುರುಂಜಿಯವರ ಕ್ಯಾಸೆಟ್ಸ್, ಅಮರಶ್ರೀ ಸ್ಮರಣ ಸಂಚಿಕೆ ಇತ್ಯಾದಿ ಲಭ್ಯ. | **ಕೊಡಗು ಸಂಗಾತಿ** C/o ಪಾಂಡನ ಕಾಂಪೌಂಡ್, 21/4, (1), ಅಪ್ಪಯ್ಯ ಗೌಡ ರಸ್ತೆ, ಜೂನಿಯರ್ ಕಾಲೇಜು ಹತ್ತಿರ, ಮಡಿಕೇರಿ - 571 201<br>ಬೈತಡ್ಕ ಜಾನಕಿ ಬೆಳ್ಯಪ್ಪ ಫೋನ್ : 228047<br>ಪಾಂಡನ ರತಿ ಚಂದ್ರಶೇಖರ್ ಫೋನ್ : **228380** |
| ವಿರಾಜಪೇಟೆ | ಬಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/256591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೆಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/273370 |
| ಬೆಂಗಳೂರು ಮಹಾನಗರ | ನಂಗಾರು ಮೋದನ ಪ್ರಿಯ, ನಂ. 11, ಮೊದಲನೆ ಅಡ್ಡ ರಸ್ತೆ, ಪೆಮ್ಮಯ್ಯ ಬ್ಲಾಕ್, ಜೇಸಿನಗರ, ಬೆಂಗಳೂರು -560 006 Mobile : 94482 25160 |

ಚಂದಾ ವಿವರ : ಜೀವಾವಧಿ ಸದಸ್ಯತನ - **3000** ರೂ. ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ),

**ಕೊಡಗು ಸಂಗಾತಿಯನ್ನು ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಲು ಮರೆಯದಿರಿ.**

# ಸಂಪಾದಕೀಯ : ಈ ಸಲದ ಸಾರ್ವತ್ರಿಕ ಚುನಾವಣೆಯು ಅತಂತ್ರ ವಿಧಾನಸಭೆ ಮತ್ತು ಲೋಕಸಭೆ ಹಾಗೂ ಸಮ್ಮಿಶ್ರ ಸರ್ಕಾರಗಳು

ಈ ಸಲದ ಚುನಾವಣೆಯಲ್ಲಿ ಕರ್ನಾಟಕ ರಾಜ್ಯದಲ್ಲಿ ಹಾಗೂ ಕೇಂದ್ರದಲ್ಲಿ ಅತಂತ್ರ ವಿಧಾನಸಭೆ ಹಾಗೂ ಲೋಕಸಭೆಯಲ್ಲೂ ಎರಡೂ ಕಡೆ ಸಮ್ಮಿಶ್ರ ಸರ್ಕಾರ ಏರ್ಪಟ್ಟಿದೆ. ಇದು ರಾಜ್ಯಕ್ಕೂ ಮತ್ತು ರಾಷ್ಟ್ರಕ್ಕೂ ಸ್ಥಿರವಾದ ಸರ್ಕಾರವನ್ನು ಕೊಡಲು ಸಾಧ್ಯವಿಲ್ಲ. ರಾಜ್ಯದಲ್ಲಿ ಮುಖ್ಯಮಂತ್ರಿಗಳು ಹಾಗೂ ಕೇಂದ್ರದಲ್ಲಿ ಪ್ರಧಾನ ಮಂತ್ರಿಗಳು ತಮ್ಮದೇ ಆದ ನಿರ್ಧಾರವನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವೇ ಇಲ್ಲ. ಎಡ ಮತ್ತು ಬಲ ರಂಗಗಳ ಹಾಗೂ ಪ್ರಾದೇಶಿಕ ಪಕ್ಷಗಳ ಎಳೆದಾಟದಲ್ಲಿ ಪ್ರಧಾನಮಂತ್ರಿಗಳು ಜಂಜಾಟಕ್ಕೆ ಸಿಕ್ಕಿದಂದಾಗಿದ್ದಾರೆ.

ರಾಜ್ಯದಲ್ಲಿ ಕಾಂಗ್ರೆಸಿನ ಪ್ರಣಾಳಿಕೆಗೂ ಜನತಾಪಕ್ಷ (ಜಾತ್ಯಾತೀತ)ದ ಪ್ರಣಾಳಿಕೆಗೂ ಹೊಂದಾಣಿಕೆ ಖಂಡಿತಾ ಸಾಧ್ಯವಾಗದು. ಇದು ಯಾರ ತಪ್ಪು ? ಮತದಾರರಿಗೆ ಈ ರೀತಿಯ ಸರ್ಕಾರದಿಂದ ರಾಜ್ಯದ ಹಿತದೃಷ್ಟಿ ಕುಂಟಿತವಾಗುತ್ತದೆ ಎಂಬ ಪ್ರಜ್ಞೆ ಇಲ್ಲದಿರುವುದೇ ಕಾರಣವಾಗಿದೆ.

ಭಾರತದಲ್ಲಿ ಪ್ರಜಾಪ್ರಭುತ್ವ ಇದ್ದರೂ ಅದು ನಿರೀಕ್ಷಿಸಿದ ರೀತಿಯಲ್ಲಿ ಕೆಲಸ ಮಾಡುತ್ತಿಲ್ಲ. ಇದಕ್ಕೆ ಮತದಾರರು ಪ್ರಜ್ಞಾವಂತರಾಗಿ ಸ್ಥಿರ ಸರ್ಕಾರವನ್ನು ನಿರ್ಮಿಸುವ ಅತಿ ದೊಡ್ಡ ಹೊಣೆಗಾರಿಕೆ ಮತದಾರರಲ್ಲಿದೆ ಎಂಬುದಾಗಿ ಸಂಗಾತಿಯ ಅಭಿಪ್ರಾಯ.

## ಕೋಟಿ ಕೋಟಿ ಬೆಲೆ ಬಾಳುವ ಅಕ್ಕಿ ಗೋಧಿಯ ದುರ್ವ್ಯವಹಾರ

ಕರ್ನಾಟಕ ಜನತೆ ಈಗ ಮೂರು ವರ್ಷಗಳಿಂದ ಬರಗಾಲದ ಬೇಗೆಯಿಂದ ಬೆಂದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೂಲಿಗಾಗಿ ಅಕ್ಕಿ-ಗೋಧಿಯನ್ನು ಬಡ ಜನರಿಗಾಗಿ-ಬರಗಾಲದಿಂದ ತತ್ತರಿಸುವ ಜನರಿಗೆ ವಿತರಣೆ ಮಾಡದೆ ಕಾಳಸಂತೆಯಲ್ಲಿ ಮಾರಲು ಏರ್ಪಡಿಸಿದ ಸರ್ಕಾರಿ ಸಿಬ್ಬಂದಿಗಳಿಗೂ ಮತ್ತು ವರ್ತಕರಿಗೂ ಏನು ಹೇಳಬೇಕು ? ಇಂತಹವರನ್ನು ದೇವರು ಕ್ಷಮಿಸುವುದು ಹೋಗಲಿ ಜನರೂ ಕ್ಷಮಿಸಬಾರದಂತಹ ಕಾಳಸಂತೆಕೋರರನ್ನು ಮರಣ ದಂಡನೆಗೆ ಗುರಿ ಮಾಡಬೇಕೇ ಹೊರತು ಬೇರೆ ಯಾವ ರೀತಿಯ ಶಿಕ್ಷೆ ಅತೀ ಕಡಿಮೆಯಾಗುತ್ತದೆ. ಇಂತ ಕಾಳಸಂತೆಕೋರರು ದೇಶ ದ್ರೋಹಿಗಳೂ ಹೌದು ಸಮಾಜ ದ್ರೋಹಿಗಳೂ ಹೌದು ಎಂದು ಸಂಗಾತಿಯ ಅಭಿಪ್ರಾಯ.

## ಪಶ್ಚಿಮಘಟ್ಟದ ಲೋಕಸಭಾ ಅಭ್ಯರ್ಥಿ ಸದಾನಂದಗೌಡರಿಗೆ ಬಿ.ಜೆ.ಪಿ.ಯ ರಾಷ್ಟ್ರೀಯ ಕಾರ್ಯದರ್ಶಿ ಪಟ್ಟ

ಮಂಗಳೂರು ಮತ್ತು ಕೊಡಗು ಲೋಕಸಭಾ ಕ್ಷೇತ್ರದ ಪ್ರಭಾವಿ ನಾಯಕ ದೇವರಗುಂಡ ಸದಾನಂದಗೌಡರು ಭಾರತೀಯ ಜನತಾ ಪಕ್ಷದ ರಾಷ್ಟ್ರೀಯ ಕಾರ್ಯದರ್ಶಿಯಾಗಿ ಇತ್ತೀಚೆಗೆ ನಿಯುಕ್ತಿಗೊಂಡಿದ್ದಾರೆ.

ಭಾರತೀಯ ಜನತಾ ಪಕ್ಷದ ಉನ್ನತ ನಾಯಕರು ಮುಂಬರುವ ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಪಕ್ಷವನ್ನು ರಾಷ್ಟ್ರ ಮಟ್ಟದಲ್ಲಿ ಪುನರ್‌ರಚನೆ ಮಾಡಿದ್ದು ಹಾಗೂ ಸಂಘಟಿಸುವ ಅತೀ ದೊಡ್ಡ ಹೊಣೆಗಾರಿಕೆಯನ್ನು ಈ ಕ್ಷೇತ್ರದ ಲೋಕಸಭಾ ಅಭ್ಯರ್ಥಿ ಪಶ್ಚಿಮಘಟ್ಟ ಕರಾವಳಿ ಪ್ರದೇಶದ ಧೀಮಂತ ನಾಯಕ ಬಡವರ ಬಂಧು ಅರೆಭಾಷೆ ಗೌಡ ಜನಾಂಗ ಕಂಡ ಅತೀ ಶ್ರೇಷ್ಠ ರಾಜಕಾರಣಿ ಡಿ. ವಿ. ಸದಾನಂದಗೌಡರ ಕಾರ್ಯ ವ್ಯಾಪ್ತಿ ಈಗ ವಿಸ್ತಾರಗೊಂಡಿದೆ.

ಗೌಡರು ಸುಳ್ಯದಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿ ನಂತರ ರಾಜಕೀಯ ಜೀವನ ಮುಂದುವರಿಸಿದ ಡಿ.ವಿ.ಜಿ.ಯವರು ಭಾರತೀಯ ಜನತಾ ಪಾರ್ಟಿ ಅಸ್ತಿತ್ವಕ್ಕೆ ಬಂದಾಗ ಸುಳ್ಯ ತಾಲ್ಲೂಕು ಅಧ್ಯಕ್ಷರಾಗಿದ್ದರು. ತದನಂತರ ಜಿಲ್ಲೆ ಮತ್ತು ರಾಜ್ಯಗಳಲ್ಲಿ ಪದಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದರು. ಎರಡು ಭಾರಿ ವಿಧಾನ ಸಭಾ ಸದಸ್ಯರಾಗಿ ನಂತರ ಕರ್ನಾಟಕ ವಿಧಾನಸಭೆಯ ವಿರೋಧ ಪಕ್ಷದ ನಾಯಕರಾಗಿದ್ದರು. ಇತ್ತೀಚೆಗೆ ನಡೆದ, ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕ ರಾಜ್ಯದ ಮಾಜಿ ಮುಖ್ಯಮಂತ್ರಿ ವೀರಪ್ಪಮೊಯ್ಲಿಯವರನ್ನು ಸುಮಾರು 33,000 ಓಟುಗಳಿಂದ ಪರಾಭವಗೊಳಿಸಿ ಪ್ರಸ್ತುತ ಲೋಕಸಭೆಗೆ ಆಯ್ಕೆಯಾದರು.

ತದನಂತರ ಬಿ. ಜೆ. ಪಿ.ಯ ರಾಷ್ಟ್ರೀಯ ಮಟ್ಟದ ಕಾರ್ಯಕಾರಿಣಿ ಸಭೆಯಲ್ಲಿ ನಡೆದ ಶಿಫಾರಸ್ಸಿನಂತೆ ಬಿ.ಜೆ.ಪಿ.ಯ ರಾಷ್ಟ್ರೀಯ ಕಾರ್ಯದರ್ಶಿಯಾಗಿ ಆಯ್ಕೆಯಾಗಿರುವುದು ನಿಜಕ್ಕೂ ಹೆಮ್ಮೆಯ ವಿಚಾರವಾಗಿದೆ.

ಕ್ಷೇತ್ರದ ಜನತೆಯ ಆಶೋತ್ತರಗಳಿಗೆ ಸ್ಪಂದಿಸಿ ಉತ್ತಮ ಕಾರ್ಯಗೈಯ್ಯುವಲ್ಲಿಗೆ ಆ ಪರಮಾತ್ಮ ಅವರಿಗೆ ಸಕಲ ಶಕ್ತಿಯನ್ನು ನೀಡಲೆಂದು ಈ ಸಂದರ್ಭದಲ್ಲಿ ಶುಭ ಹಾರೈಸೋಣ.

- ಸಂಗಾತಿ

ಆತ್ಮವಿಶ್ವಾಸದಿಂದ ಕುಸಿಯುವವನು ಒಂದು ದಿನ ಖಂಡಿತ ಮೇಲೇಳುತ್ತಾನೆ.

# ಹಳೆಗನ್ನಡ ಸಾಹಿತ್ಯ ಕೃತಿಗಳ ಜೀರ್ಣೋದ್ಧಾರ ಕಾರ್ಯ ಆರಂಭ

ಹಳೆಗನ್ನಡದಿಂದ ಹಿಡಿದು ಹೊಸಗನ್ನಡ ತನಕ ಹಲವಾರು ಸಾಹಿತ್ಯಗಳು ರಚಿತಗೊಂಡಿವೆ. ನಮ್ಮ ಕನ್ನಡ ರಚಿತಗಳು ಸಾಕಷ್ಟು ಸಂಖ್ಯೆಯಲ್ಲಿ ಬರುತ್ತಲಿವೆ. ಕೆಲವರು ವಿಶ್ವಮಾನವದತ್ತ ದೃಷ್ಟಿಯನ್ನು ಹಾಯಿಸಿದ್ದಾರೆ.

21-5-2004ರಂದು ಮಡಿಕೇರಿ ನಗರದಲ್ಲಿ ರಾಷ್ಟ್ರಕವಿ ಕುವೆಂಪುನವರ ಪುತ್ಥಳಿ ಅನಾವರಣ ಸಮಾರಂಭವು ನಡೆಯಿತು. ಈ ಸಂದರ್ಭದಲ್ಲಿ ಮಾತನಾಡಿದ ಕನ್ನಡ ಸಾಹಿತ್ಯ ಪರಿಷತ್ ರಾಜ್ಯಾಧ್ಯಕ್ಷರಾದ ಧರ್ಮದರ್ಶಿ ಹರಿಕೃಷ್ಣ ಪುನರೂರುನವರು ಮಾತನಾಡುತ್ತಾ ಕ. ಸಾ. ಪ. ಅಧ್ಯಕ್ಷರಿಗೆ ಮೇಲ್ಮನೆ ಸದಸ್ಯತ್ವ ನೀಡಬೇಕೆಂದು ಒತ್ತಾಯಿಸಿದರಲ್ಲದೆ, ಸರಕಾರವು ಪರಿಷತ್‌ಗೆ 55 ಲಕ್ಷ ರೂಪಾಯಿಗಳ ಅನುದಾನ ನೀಡಿದೆ. ಸುಮಾರು 70 ಹಳೆಗನ್ನಡದ ಬೃಹದ್ಗ್ರಂಥಗಳನ್ನು ಪುನರ್ ಮುದ್ರಿಸಲಾಗುತ್ತಿದೆ. ಕರ್ನಾಟಕ ಕವಿ ಚರಿತ್ರೆಯ ಮೂರು ಭಾಗಗಳನ್ನು ಪುರಸ್ಕರಿಸಲಾಗುತ್ತಿದೆ. ಇದರೊಂದಿಗೆ "ಕನ್ನಡ-ಕನ್ನಡ-ಇಂಗ್ಲಿಷ್" ನಿಘಂಟು ಮತ್ತು ರತ್ನಕೋಶಗಳನ್ನು ಬಿಡುಗಡೆ ಮಾಡಲಾಗುತ್ತಿದ್ದು, ವಿದ್ವಾಂಸರು ಪರಿಶೀಲಿಸಿದ ನಂತರ ಕೆಲವು ದಿನಗಳಲ್ಲಿಯೇ ಬಿಡುಗಡೆಯಾಗಲಿದೆಯೆಂದಿದ್ದಾರೆ.

ಗತಕಾಲದಲ್ಲಿ ಹುದುಗಿ ಹೋಗಿ ಇತಿಹಾಸದ ಹಳೆಗನ್ನಡದ ಪಳೆಯುಳಿಕೆಗೆ ನೀರುಣಿಸಿ ಪೋಷಿಸುವ ಕಾಲ ಸನ್ನಿಹಿತವಾಗಿರುವುದು ಖುಷಿಯನ್ನು ತರುವ ವಿಚಾರವಲ್ಲದೆ ಸರ್ಕಾರದ ಈ ಕ. ಸಾ. ಪ. ದ ಕಾರ್ಯಕ್ರಮವು ಶ್ಲಾಘನೀಯವಾಗಿದೆ.

- ಸಂಗಾತಿ

---

## ಇರ್ಪು

ಆಹಾ ! ಎಂತಹ ಸುಂದರ
ಆ...... ರಮ್ಯ ಪರಿಸರ

ಹತ್ತಿದೆನು ಏರುದಾರಿ
ಹೇಗೇಳಲಿ ಆ ಪರಿ... ?

ಸೆಳೆಯುತ್ತಿತ್ತು ಕಣ್ಮನ,
ತಣಿಯುತ್ತಿತ್ತು ಮೈಮನ...

ಆ ಬೆಡಗಿಯ ನರ್ತನ,
ಸುತ್ತ, ಅಮೃತ ಸಿಂಚನ..

ಹಾ ! ಲಕ್ಷ್ಮಣ ತೀರ್ಥ,
ಎನಿತು ಸುಂದರ ಜಲಪಾತ...

ಬಂಡೆಯಿಂದ ಬಂಡೆಗೆ
ಎಂಥ ಸೊಬಗು ನಿನಗೆ.
ನಿನಗಿಲ್ಲ ಬೇಧ - ಭಾವ
ಯಾರಾದರೇನು ಬಲ್ಲಿದ - ಬಡವ !

ಬೇಗುದಿಯ ಮನವಾ,
ಬೆವರಿದ ತನುವ.....

ನೀ.. ತಣಿಸುವೆ,
ನಮ್ಮ ನಲಿಸುವೆ.....

ಹೇಗೇಳಲಿ.... ಏನೇಳು ?
ಭಾವನೆಗಳು ಅಸಂಖ್ಯೆಯಲಿ..

ಸವಿ - ಸವಿಯುತಾ
ನಲಿ - ನಲಿಯುತಾ

ಆ... ನೀರ ರಸದಾಟ
ಸಿಕ್ಕ .... ಆ ರಸದೂಟ

ಮರೆಯ ಬಲ್ಲೆನೆ .... ?
ನೆನೆಯದಿರುವೆನೆ...

- ಮೂಡಗದ್ದೆ ಕೃಪಾ, ತಿತಿಮತಿ

---

*ಗಿರಾಕಿ*

ಪುಟ್ಟು : ಈ ಟೈಯಿದ್ ರೇಟ್ ಹೆಂಗೆ ?
ಮಮ್ಮು : ಇದ್‌ಕ್ಕೆ ರೇಟ್ ಕಮ್ಮಿ, ನೂರ ಐವತ್ತು.
ಪುಟ್ಟು : ಅಷ್ಟಕ್ಕೆ ಒಂದು ಜೊತೆ "ಶೂ" ಬಂದದೆ.
ಮಮ್ಮು : ಹಂಗಾರೆ "ಶೂ"ನ ಕುತ್ತಿಗೆಗೆ ಹಾಕಣೆ.
- ಕಾನಡ್ಕ ಚರಣ್ ಶಿವಯ್ಯ, ಮರಗೋಡು

*ಅಧಿಕಾರ*

ರಾಜಕಾರಣಿಗಳ ವಿಚಾರ
ಜನಗಳಿಗೆಲ್ಲಾ ಅದು ಪ್ರಚಾರ
ಗೆದ್ದರೆ ಅಧಿಕಾರ
ಸೋತರೆ ಧಿಕ್ಕಾರ
ಸುವರ್ಣ ಕೊಡಗಹಳ್ಳಿ, ಬಸ್ರೂರು

*ಮಹಿಳೆ*

ಮಹಿಳೆ, ಮಹಿಳೆ, ಮಹಿಳೆ
ನೀ ಏನೆಲ್ಲಾ ತ್ಯಾಗ ಮಾಡಿದರೂ ಕೀಳೆ
ನೀ ಎಷ್ಟು ಬುದ್ಧಿವಂತಳೇಳೇ
ನೀ ಸಮಾಜದಲ್ಲಿ ಎಲ್ಲರಿಗೂ ಸರಿಸಮಾನಳೇ
ಗಂಡಸಿಗಂತು ನೀ ಕಮ್ಮಿ ಇಲ್ಲವೇನೇಳೇ
ಕೆಲವು ವೇಳೆ ನೀ ಮಂಕು ಮಹಿಳೆ.
ಶುಭ, ಅರಕೆರೆ

---

ಶ್ರದ್ಧೆ, ಉತ್ಸಾಹಗಳಿಂದ ಆತ್ಮವಿಶ್ವಾಸ ಬಲಿಯುತ್ತದೆ, ಬೆಳೆಯುತ್ತದೆ.

# ಮಡಿಕೇರಿ ನಗರದಲ್ಲಿ ಕುವೆಂಪು ಪ್ರತಿಮೆ, ಪ್ರತಿಭಾವಂತ ಕಲಾವಿದರಿಗೆ ಸನ್ಮಾನ ;

## ಕಲಾಸಾಗರ ಅಕಾಡೆಮಿಯ ವರ್ಣಮಯ ಸಮಾರಂಭ

ಕುವೆಂಪು ಶತಮಾನೋತ್ಸವದ ಅಂಗವಾಗಿ ಮಡಿಕೇರಿಯಲ್ಲಿ ಪ್ರಥಮ ಪ್ರತಿಮೆ ಅನಾವರಣ, ರಾಜ್ಯ ಹಾಗೂ ಜಿಲ್ಲೆಯ ಕಲಾವಿದರಿಗೆ ಸನ್ಮಾನ ಮತ್ತು ಜಾನಪದ ತಂಡಗಳಿಂದ ಸಾಂಸ್ಕೃತಿಕ ಕಾರ್ಯಕ್ರಮ ಮಡಿಕೇರಿ ಕಲಾರಸಿಕರಿಗೆ ಮಡಿಕೇರಿಯಲ್ಲಿ ಇತ್ತೀಚೆಗೆ ಸುಂದರ ಕಾರ್ಯಕ್ರಮಗಳು ಜರುಗಿದವು.

ನಗರದಲ್ಲಿ ರಾಷ್ಟ್ರಕವಿ ಕುವೆಂಪು ಪ್ರತಿಮೆ ಅನಾವರಣ ಹಾಗೂ ಜಾನಪದ ಸಾಂಸ್ಕೃತಿಕ ಸಂಜೆ ಕಾರ್ಯಕ್ರಮಗಳನ್ನು ದಿನಾಂಕ 29-5-2004ರಂದು ಏರ್ಪಡಿಸಲಾಗಿತ್ತು.

ಡಿ.ಸಿ.ಸಿ. ಬ್ಯಾಂಕ್ ಬಳಿಯ ಉದ್ಯಾನವನದಲ್ಲಿ ಪ್ರತಿಮೆ ಅನಾವರಣಗೊಳಿಸಿದ ಬಳಿಕ ಕಾವೇರಿ ಕಲಾಕ್ಷೇತ್ರದಲ್ಲಿ ಅಂಬಳೆ ಸುಬ್ಬರಾವ್ ವೇದಿಕೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ರಾಜ್ಯ ಹಾಗೂ ಜಿಲ್ಲಾ ಮಟ್ಟದ ಕಲಾವಿದರುಗಳಾದ ಕೆ. ರಮೇಶ್, ನಿರ್ಮಲಾ ಬೋಪಣ್ಣ, ಅರವಿಂದ ಕಿಗ್ಗಾಲ್,ಜಿ. ಚಿದ್ವಿಲಾಸ್, ವಿಶ್ವನಾಥ್ ಭರಣಿ, ಕೃಷ್ಣ, ಸಿ.ಬಿ. ವಿಜಯಕುಮಾರ್, ಸಾಲಿಹಾ ಮಜೀದ್ ಅವರುಗಳು ಗಣ್ಯರಿಂದ ಸನ್ಮಾನ ಸ್ವೀಕರಿಸಿದರು. ಜೀವಮಾನ ಸಾಧನೆಗಾಗಿ ದಿವಂಗತ ಅಂಬಳೆ ಸುಬ್ಬರಾವ್ ಅವರ ಕುಟುಂಬಸ್ಥರು ಸನ್ಮಾನ ಸ್ವೀಕರಿಸಿದರು. ಕುವೆಂಪು ಪ್ರತಿಮೆ ಅನಾವರಣ ಹಾಗೂ ಅಂಬಳೆ ಸುಬ್ಬರಾವ್ ವೇದಿಕೆಯನ್ನು ಉದ್ಘಾಟಿಸಿದ ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಹರಿಕೃಷ್ಣ ಪುನರೂರು ಅವರು ಮಾತನಾಡಿ, ಕುವೆಂಪು ಜನ್ಮ ಶತಮಾನೋತ್ಸವದ ಅಂಗವಾಗಿ ಸರಕಾರವೇ ಇಡೀ ವರ್ಷ ಕಾರ್ಯಕ್ರಮ ಹಮ್ಮಿಕೊಂಡಿದ್ದರೂ, ಸರಕಾರಿ ಅಧಿಕಾರಿಗಳು ಕಾರ್ಯಕ್ರಮದ ಅರ್ಥಪೂರ್ಣ ಆಚರಣೆಗೆ ಸಹಕರಿಸುತ್ತಿಲ್ಲ ಎಂದು ಕುಟುಕಿದರು. ವಿಶ್ವ ಮಾನವನ ಬಗ್ಗೆ ಹಿರಿಯ ತಲೆಮಾರಿಗೆ ತಿಳಿದಿದ್ದರೂ ಮುಂದಿನ ಪೀಳಿಗೆಗೆ ಅರಿವು ಮೂಡಿಸಬೇಕಾದ ಅವಶ್ಯಕತೆಯಿದ್ದು, ಕನ್ನಡ ಸಾಹಿತ್ಯ ಪರಿಷತ್ತು ಈ ನಿಟ್ಟಿನಲ್ಲಿ ಶ್ರಮಿಸುತ್ತಿದೆ ಎಂದವರು ನುಡಿದರು.

ಸರಕಾರಿ ಕಾರ್ಯಕ್ರಮಗಳಿಗಿಂತ ಸಂಘ ಸಂಸ್ಥೆಗಳು ನಡೆಸುವ ಚಟುವಟಿಕೆಗಳು ಹೆಚ್ಚು ಪರಿಣಾಮಕಾರಿ ಎಂದು ನುಡಿದ ಅವರು ಕಲಾವಿದರನ್ನು ಸಂಘ ಸಂಸ್ಥೆಗಳು ಗುರುತಿಸಿ ಪ್ರೋತ್ಸಾಹಿಸುವುದು ಉತ್ತಮವೆಂದು ಅಭಿಪ್ರಾಯಪಟ್ಟರು. ಕುವೆಂಪು ಅವರ ಆದರ್ಶಗಳನ್ನು ಪಾಲಿಸಲು ಪ್ರತಿಯೊಬ್ಬರೂ ಮುಂದಾಗಬೇಕೆಂದು ಅವರು ಕರೆ ನೀಡಿದರು.

ಕೊಡವ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ರಾಜಾ ನಂಜಪ್ಪ ಅವರು ಮಾತನಾಡಿ ಕುವೆಂಪುರವರಂತಹ ಮಹಾನ್ ವ್ಯಕ್ತಿಗಳ ಕುರಿತಾದ ಇಂತಹ ಕಾರ್ಯಕ್ರಮಗಳಿಗೆ ಸಾರ್ವಜನಿಕರು ಪಾಲ್ಗೊಳ್ಳಲು ಹಿಂಜರಿಯುತ್ತಿರುವುದರ ಬಗ್ಗೆ ವಿಷಾದ ವ್ಯಕ್ತಪಡಿಸಿದರು. ಕಾರ್ಯಕ್ರಮದಲ್ಲಿ ಭಾಗವಹಿಸುವ ಜನರು ಬಾರದಿರುವವರಿಗೆ ಈ ಬಗ್ಗೆ ಅರಿವು ಮೂಡಿಸುವಂತೆ ಅವರು ಕರೆ ನೀಡಿದರು. ಪುತ್ತೂರಿದಾನಿ ನಗರ ನೀರು ಸರಬರಾಜು ಹಾಗೂ ಒಳ ಚರಂಡಿ ಮಂಡಳಿ ಅಧ್ಯಕ್ಷೆ, ಹಾಗೂ ಕುವೆಂಪು ಅವರ ಸಂಬಂಧಿ ಕೆ. ಪಿ. ಚಂದ್ರಕಲಾ ಪ್ರಸನ್ನ ಮಾತನಾಡಿ ಜಿಲ್ಲೆಯಲ್ಲಿ ಸಂಘ ಸಂಸ್ಥೆಗಳ ಹಲವಾರು ಕಾರ್ಯಕ್ರಮಗಳಿಗೆ ಜಿಲ್ಲಾಡಳಿತ ಅಡಚಣೆಯುಂಟು ಮಾಡುತ್ತಿದೆ ಎಂದು ಆಕ್ಷೇಪಿಸಿದರು. ಜಿಲ್ಲಾಡಳಿತ ಅಥವಾ ನಗರಸಭೆ ಮಾಡಬೇಕಿದ್ದ ಇಂತಹ ಉತ್ತಮ ಕಾರ್ಯಕ್ರಮವನ್ನು ಕಲಾಸಾಗರ ಸಂಸ್ಥೆ ಮಾಡಿದೆ ಎಂದು ಅವರು ಮೆಚ್ಚುಗೆ ವ್ಯಕ್ತಪಡಿಸಿದರು. ಅಕಾಡೆಮಿಯ ಗೌರವ ಅಧ್ಯಕ್ಷ ಟಿ. ಪಿ. ರಮೇಶ್ ಅವರು ಪ್ರಾಸ್ತಾವಿಕವಾಗಿ ಮಾತನಾಡಿ ಕಾರ್ಯಕ್ರಮಕ್ಕೆ ಸರಕಾರದ ಪ್ರತಿನಿಧಿಗಳು ಆಹ್ವಾನಿತರಾಗಿದ್ದರೂ ಪಾಲ್ಗೊಳ್ಳದಿರುವ ಬಗ್ಗೆ ಆಕ್ಷೇಪ ವ್ಯಕ್ತಪಡಿಸಿದರು. ಕುವೆಂಪು ಅವರು ಧೀಮಂತ ವ್ಯಕ್ತಿ ಎಂದು ಬಣ್ಣಿಸಿದ ಅವರು, ಅವರ ಕುರಿತ ಕಾರ್ಯಕ್ರಮವನ್ನು ಜಿಲ್ಲೆಯ ಉತ್ತಮ ವಿದ್ವಾನ್ ದಿ. ಅಂಬಳೆ ಸುಬ್ಬರಾವ್ ಅವರ ಹೆಸರಿನ ವೇದಿಕೆಯಲ್ಲಿ ನಡೆಸುತ್ತಿರುವುದಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕಲಾಸಾಗರದ ಅಧ್ಯಕ್ಷ ಅಬ್ದುಲ್ ಹಫೀಜ್ ಅವರು ವಹಿಸಿದ್ದರು. ಈ ಸಂದರ್ಭ 'ಶಕ್ತಿ' ಸಂಪಾದಕ ಹಾಗೂ ಜಿಲ್ಲಾ ಚೇಂಬರ್ ಆಫ್ ಕಾಮರ್ಸ್ ಅಧ್ಯಕ್ಷ ಜಿ. ರಾಜೇಂದ್ರ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಎಸ್. ಸಿ. ರಾಜಶೇಖರ್, ಜಿ. ಪಂ. ಸದಸ್ಯ ರಘುನಾಥ ನಾಯಕ್, ನಗರಸಭಾ ಸದಸ್ಯರುಗಳಾದ ಮೋಂತಿ ಗಣೇಶ್, ಬಿಟ್ಟೀರ ರಾಮಯ್ಯ, ಹೆಚ್. ಎಂ. ನಂದಕುಮಾರ್, ಬೇಬಿಮ್ಯಾಥ್ಯು ಮತ್ತಿತರರು ಉಪಸ್ಥಿತರಿದ್ದರು.

ಶಾಸ್ತ್ರೀಯ ಹಾಗೂ ಸುಗಮ ಸಂಗೀತ ಕಲಾವಿದೆ ಪೊನ್ನಂಪೇಟೆಯ ನಿರ್ಮಲ ಬೋಪಣ್ಣ ಅವರನ್ನು ಸಂಗೀತ ನಿರ್ದೇಶಕ, ವೀರಾಜಪೇಟೆಯ ಅರವಿಂದ ಕಿಗ್ಗಾಲ್ ಅವರನ್ನು ಹರಿಕೃಷ್ಣ ಪುನರೂರು ಅವರು ಸನ್ಮಾನಿಸಿದರು.

ಸುಗಮ ಸಂಗೀತ ಕಲಾವಿದ ಮಡಿಕೇರಿಯ ಸ್ನೇಹ ಸಂಗಮದ ಜಿ. ಚಿದ್ವಿಲಾಸ್, ರಾಜಾನಂಜಪ್ಪ, ಸಾಲಿಹಾ ಮಜೀದ್, ಗಾಯಕ ಮತ್ತು ಅನುಕರಣಾ ಕಲಾವಿದ ಮಡಿಕೇರಿ ವಿಶ್ವನಾಥ್ ಭರಣಿ, ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಎಸ್. ಸಿ. ರಾಜಶೇಖರ್, ನಾಟಕ ಕ್ಷೇತ್ರದ ಮಡಿಕೇರಿಯ ಬಿ. ಎ. ಶಂಷುದೀನ್, ತಬಲ ವಾದಕ ಮಡಕೇರಿಯ ಕೃಷ್ಣ, ಅಂತಾರಾಷ್ಟ್ರೀಯ ಜಾನಪದ ಗಾಯನ ಮತ್ತು ತಬಲವಾದಕ ಹೆಬ್ಬಾಲೆಯ ಸಿ. ಬಿ. ವಿಜಯಕುಮಾರ್, ದಕ್ಷಿಣ ಕನ್ನಡದ ಕಲ್ಲಡ್ಕದ ಜಾನಪದ ಗೊಂಬೆ ಕಲಾವಿದ ಕೆ. ರಮೇಶ್ ಹಾಗೂ ಜೀವಮಾನ ಸಾಧನೆಯ ಪ್ರಶಸ್ತಿಗೆ ಪಾತ್ರರಾದ ದಿವಂಗತ ಅಂಬಳೆ ಸುಬ್ಬರಾವ್ ಅವರ ಪರವಾಗಿ ಪುತ್ರ ಕೆ.ಎಸ್. ಸತ್ಯಪ್ರಸಾದ್ ಹಾಗೂ ಕುಟುಂಬಸ್ಥರಿಗೆ ವೇದಿಕೆಯಲ್ಲಿದ್ದ ಗಣ್ಯರು ಪ್ರಶಸ್ತಿ

ಅಹಂಕಾರಿಯ ಮನಸ್ಸು ಸರ್ಪದ ಹುತ್ತ ; ಅಸಹನೆ ಅಲ್ಲಿ ಸದಾ ಭುಸ್ ಎನ್ನುತ್ತಿರುತ್ತದೆ.

ವಿತರಿಸಿದರು.

ಅರ್ಚನಾ ಗಿರೀಶ್ ಪ್ರಾರ್ಥಿಸಿ, ಮುನೀರ್ ಅಹಮದ್ ಸ್ವಾಗತಿಸಿದರು. ಲಿಯಾಕತ್ ಆಲಿ ಅಂಬಳೆ ಸುಬ್ಬರಾವ್ ವಿರಚಿತ ಸ್ವಾಗತ ಗೀತೆ ಹಾಡಿದರು. ಶಿವಕುಮಾರ್ ಕಾರ್ಯಕ್ರಮ ನಿರೂಪಿಸಿ, ಬೇಬಿ ಮ್ಯಾಥ್ಯು ವಂದಿಸಿದರು. ಬಳಿಕ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು.

## ಮಂಜಿನ ನಗರಕ್ಕೆ ಶೋಭೆಯಾದ ಕುವೆಂಪು ಪುತ್ಥಳಿ



'ಮಲೆನಾಡ ಕವಿ' ಎಂದೇ ಖ್ಯಾತರಾದ 'ವಿಶ್ವಮಾನವ' ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ ಅವರ ಪುತ್ಥಳಿಯನ್ನು ಕಲಾಸಾಗರ ಸಂಗೀತ ಮತ್ತು ನೃತ್ಯ ಅಕಾಡೆಮಿ ವತಿಯಿಂದ ಇತ್ತೀಚೆಗೆ ಮಡಿಕೇರಿ ಡಿಸಿಸಿ ಬ್ಯಾಂಕ್ ಸಮೀಪದ ಉದ್ಯಾನವನದಲ್ಲಿ ಅನಾವರಣ ಮಾಡಲಾಯಿತು.

ಸುಮಾರು 35 ಸಾವಿರ ವೆಚ್ಚದ ಪುತ್ಥಳಿಯನ್ನು ಕುವೆಂಪು ಅವರ ಸೋದರ ಸಂಬಂಧಿಗಳೂ ಆಗಿರುವ, ರಾಜ್ಯ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಅಧ್ಯಕ್ಷೆ ಕೆ. ಪಿ. ಚಂದ್ರಕಲಾ ಮತ್ತು ಪ್ರಸನ್ನ ದಂಪತಿಗಳು ಉದಾರವಾಗಿ ನೀಡಿದ್ದಾರೆ.

ಚಂದ್ರಕಲಾ ಅವರು ಪುತ್ಥಳಿಯನ್ನು ಅನಾವರಣ ಗೊಳಿಸಿದರು. ಇದಕ್ಕೂ ಮುನ್ನ ವಿಶ್ವಮಾನವ ಉದ್ಯಾನವನ್ನು ಚಿತ್ರನಟ ಜೈಜಗದೀಶ್-ವಿಜಯಲಕ್ಷ್ಮೀಸಿಂಗ್ ದಂಪತಿಗಳು ಉದ್ಘಾಟಿಸಿದರೆ, ನಾಮಫಲಕವನ್ನು ಮಾಜಿ ಶಾಸಕ ಡಿ.ಎಸ್. ಮಾದಪ್ಪ ಅನಾವರಣಗೊಳಿಸಿದರು. ಈ ಸಂದರ್ಭ ರಾಜ್ಯ ಕಸಾಪ ಅಧ್ಯಕ್ಷ ಹರಿಕೃಷ್ಣ ಪುನರೂರು, ಕೊಡವ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ರಾಜಾ ನಂಜಪ್ಪ, ಟಿ.ಪಿ. ರಮೇಶ್, ಕನ್ನಡ ಮತ್ತು ಸಂಸ್ಕೃತಿ ಇಲಾಖಾ ಸಹಾಯಕ ನಿರ್ದೇಶಕ ದಾಮೋದರ, ಕಲಾಸಾಗರ ಅಕಾಡೆಮಿಯ ಹಫೀಝ್ ಖಾನ್, ಮುನೀರ್ ಅಹಮದ್, ಲಿಯಾಕತ್ ಆಲಿ, ಕೆ. ಟಿ. ಬೇಬಿ ಮ್ಯಾಥ್ಯೂ ಮತ್ತಿತರು ಹಾಜರಿದ್ದರು.

- ಸಂಗಾತಿ

## ಮಡಿಕೇರಿ ಕುವೆಂಪು ಪ್ರತಿಮೆ ಅನಾವರಣ ವಿಶ್ವಮಾನವ ಕುವೆಂಪು ಒಂದು ನೆನಪು ...

ಮಾನವ - ಸಹೃದಯಿ - ವಿಶ್ವ ಮಾನವಾ ।
ಕನ್ನಡ ಜನಕುಲದ ದೀಪೋದ್ಭವ ॥
ಮಹಾಕಾವ್ಯಗಳ ಕವಿ ಕುವೆಂಪು ।
ಸೂಸಿದೆ ನಾಡಿನಲ್ಲಿ ಕನ್ನಡದ ಕಂಪು ॥

ಭಾರತೀಯ ರಸಪರಂಪರೆ - ಋಷಿಪರಂಪರೆ ।
ಜಾತಿಮತ ತತ್ವಗಳ ಬಂಧನದಿಂದ - ಮುಕ್ತನಾದೆ ॥
ವಿಶ್ವಾತ್ಮನಾದೆ - ಈ ನಾಡಿನಲಿ ಹುತಾತ್ಮನಾದೆ ॥
ಕಾವ್ಯಪ್ರಿ ಕುವೆಂಪು - ಅಭಿಮಾನಿಗಳ ಗೆದ್ದೆ ॥

ಮೂಲ ಜನ್ಮವದು ಕುಪ್ಪಳ್ಳಿಯಲ್ಲಿ ।
ಬೆಳೆದು ಸಾಧಿಸಿದ್ದು - ಇಡೀ ನಾಡಿನಲ್ಲಿ ॥
ಕನ್ನಡ ಸಾಹಿತ್ಯದ ಐಸಿರಿಯ ಕವಿಯಾಗಿ ॥
ಕಾವ್ಯ ಲೋಕದ ಅದಮ್ಯ ತಾರೆಯಾಗಿ ॥

ಮಲೆನಾಡು ಹಸಿರು ಉಸಿರು ಇವರದು ।
ಪ್ರಕೃತಿ ಮಡಿಲಲ್ಲಿ ಕೋಗಿಲೆಯಾಗಿ ಉಲಿದು ।
ಸಹ್ಯಾದ್ರಿ ಅಖಂಡತೆಗೆ ಸಾಹಿತ್ಯ ಕೃಷಿಯಾಗಿ ।
ಕಾವೇರಿಯಂತೆ ಮೃದು ಮಧುರ ಭಾಷಿಯಾಗಿ ।

ತೀರ್ಥಹಳ್ಳಿ ಮೈಸೂರುಗಳಲ್ಲಿ ಅಧ್ಯಯನಗೈದು ।
ಆಂಗ್ಲ ಕಾವ್ಯ ಕನ್ನಿಕೆಯ ಮೋಹಕತೆಗೆ ಒಲಿದು ॥
ಒಲಿದು ಉಲಿದರು ಪದವಿ ಪಡೆದರು ।
ಆಂಗ್ಲ ಕಾವ್ಯ ಕನ್ನಿಕೆಯ ಸ್ಥಾನವೇರಿದರು ॥

ಕಸಿನ್ಸರ್ ಹಿತವಚನದಿಂದ ಅಂದು ಜ್ಞಾನೋದಯ ।
ಕನ್ನಡ ಕಾವ್ಯಲೋಕಕ್ಕೆ ಇಂದು ಸೂರ್ಯೋದಯ ॥
ದೋಣಿ ಸಾಗಲಿ - ಮುಂದೆ ಹೋಗಲಿ ।
ತೊದಲ್ನುಡಿ ಮೊದಲಾಗಿ - ಜೀವನ ಜೋಕಾಲಿ ॥

ಕುವೆಂಪು ಎಂಬ ಹೆಸರಿನಲ್ಲಿ ಇಂದ್ರಜಾಲ ಶಕ್ತಿ ।
ಮುಂಗಾರು ಮಳೆಯ ಎಳೆಮಿಂಚನ್ನು ಆಸ್ವಾದಿಸಿ ॥
ಕುಣಿವ ನವಿಲಿನಂತೆ - ಅವರ ಹೆಸರು ಕೇಳಿ ।
ಕನ್ನಡದ ಕೋಟಿ ಜನಕ್ಕೆ ರೋಚಕ ಗಾಳಿ ॥

ಸ್ವರಚನೆ - ಬೈತಡ್ಕ ಜಾನಕಿ ಬೆಳ್ಯಪ್ಪ, ಮಡಿಕೇರಿ

## ಕಾಲೇಜು ಕನ್ಯೆ

ಓ ನನ್ನ ಕನಸಿನ ಕಾಲೇಜು ಕನ್ಯೆ
ಏಕೆ ಕಾಣಲಿಲ್ಲ ನಿನ್ನೆ ಮೊನ್ನೆ ?
ದಿನದಿನವೂ ನೋಡುತ ನಿನ್ನ ಕೆಂಪು ಕೆನ್ನೆ
ನಾ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳೆಲ್ಲಾ
ಸೊನ್ನೆ ಸೊನ್ನೆ ಸೊನ್ನೆ ......... !

ನಾ ನಿನ್ನ ಪ್ರೀತಿಸುವುದು ಗೊತ್ತಾಗಿ ಅಪ್ಪ
ಬಾರಿಸಿದರು ಬರುವಂತೆ ಬಾಸುಂಡೆ ದಪ್ಪ ದಪ್ಪ
ದಿನ ದಿನವೂ ಮಾಡುವೆ ನಾ ನಿನ್ನಯ ಸ್ತುತಿ
ನೀ ಕೈಕೊಟ್ಟರೆ ನನಗೆ ಆ ಸರ್ಕಾರಿ
ಹುಚ್ಚಾಸ್ಪತ್ರೆಯೇ ಗತಿ.

ಮುಳ್ಳಂದಿರಾ ಕಲಾ ವಾಸುದೇವ

ಶಕ್ತನಾಗಿದ್ದರೂ ಸಹ ಮನುಷ್ಯ ಕೆಲವೊಮ್ಮೆ ಕೀಳರಿಮೆಯಿಂದ ಕುಂದುತ್ತಾನೆ.

# ಕೊಡಗು : ಭಾಗ - 3 ; ಸ್ಥಾನ ನಿರ್ದೇಶನ ಮತ್ತು ಮೇರೆಗಳು

ಕರ್ನಾಟಕ ರಾಜ್ಯದಲ್ಲಿ ಕೊಡಗು ಜಿಲ್ಲೆಯು ಅತ್ಯಂತ ಎತ್ತರದ ಪ್ರದೇಶಗಳನ್ನು ಒಳಗೊಂಡಿದ್ದು ಪಶ್ಚಿಮ ಘಟ್ಟಗಳ ಪೂರ್ವ ಮತ್ತು ಪಶ್ಚಿಮ ಇಳಿಜಾರು ಪ್ರದೇಶಗಳನ್ನು ಒಳಗೊಂಡಿದೆ. ರಾಜ್ಯದ ನೈಋತ್ಯ ಮೂಲೆಯಲ್ಲಿರುವ ಕೊಡಗು ಜಿಲ್ಲೆಯು ಉತ್ತರ ಅಕ್ಷಾಂಶ 11° 56 ರಿಂದ 12° 52ರವರೆಗೆ ಮತ್ತು ಪೂರ್ವ ರೇಖಾಂಶ 75° 22 ರಿಂದ 76° 12ರವರೆಗೆ ಇರುವ ಪ್ರದೇಶದಲ್ಲಿ ವಿಸ್ತರಿಸಿದೆ. ದಕ್ಷಿಣೋತ್ತರವಾಗಿ (ಬ್ರಹ್ಮಗಿರಿ ಬೆಟ್ಟದಿಂದ ಹೇಮಾವತಿ ನದಿಯವರೆಗೆ) ಜಿಲ್ಲೆಯ ಗರಿಷ್ಠ ಉದ್ದವು 96 ಕಿ. ಮೀ. ಮತ್ತು ಪೂರ್ವ ಪಶ್ಚಿಮವಾಗಿ (ಕುಶಾಲನಗರದಿಂದ ಸಂಪಾಜೆಯವರೆಗೆ) ಜಿಲ್ಲೆಯ ಗರಿಷ್ಠ ಅಗಲವು 64 ಕಿ. ಮೀ. ಇರುತ್ತದೆ. 60 ಮೈಲು ಉದ್ದ, 40 ಮೈಲು ಅಗಲವುಳ್ಳದಾಗಿರುತ್ತದೆ. ಕೊಡಗು ಜಿಲ್ಲೆಯು ಉತ್ತರಕ್ಕೆ ಹಾಸನ ಮತ್ತು ದಕ್ಷಿಣ ಜಿಲ್ಲೆಗಳನ್ನು, ಪೂರ್ವಕ್ಕೆ ಮೈಸೂರು ಮತ್ತು ಹಾಸನ ಜಿಲ್ಲೆಗಳನ್ನು, ಪಶ್ಚಿಮಕ್ಕೆ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೇರಳ ರಾಜ್ಯವನ್ನು ಮತ್ತು ದಕ್ಷಿಣಕ್ಕೆ ಕೇರಳ ರಾಜ್ಯವನ್ನು ಎಲ್ಲೆಯಾಗಿ ಪಡೆದಿದೆ. ಜಿಲ್ಲೆಯ ಉತ್ತರ ಕಿರಿದಾದ ಭೂಪಟ್ಟಿಯು (ಸುಮಾರು 20 ಕಿ. ಮೀ. ಉದ್ದ ಮತ್ತು 10 ಕಿ. ಮೀ. ಅಗಲ) ಹಾಸನ ಜಿಲ್ಲೆಯ ಒಳಕ್ಕೆ ಚಾಚಿಕೊಂಡಿದೆ.

***ವಿಸ್ತೀರ್ಣ ಮತ್ತು ಜನಸಂಖ್ಯೆ***

ಕೊಡಗು ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ 4.102 ಚ. ಕಿ. ಮೀ. ಆಗಿದ್ದು ಬೆಂಗಳೂರು (ನಗರ) ಜಿಲ್ಲೆಯ ನಂತರ ಇದು ಕರ್ನಾಟಕ ರಾಜ್ಯದ ಅತ್ಯಂತ ಚಿಕ್ಕ ಜಿಲ್ಲೆಯಾಗಿದೆ. ಜಿಲ್ಲೆಯ ವಿಸ್ತೀರ್ಣವು ರಾಜ್ಯದ ವಿಸ್ತೀರ್ಣವಾದ 1,91,791 ಚ. ಕಿ. ಮೀ.ನಲ್ಲಿ ಶೇ. 21.14 ಆಗಿರುತ್ತದೆ. 1991ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ತಾತ್ಕಾಲಿಕ ಲೆಕ್ಕದಂತೆ 4,85,252. ಇದರಲ್ಲಿ ಗಂಡಸರ ಸಂಖ್ಯೆ 2,43,977. ಹೆಂಗಸರ ಸಂಖ್ಯೆ 2,41,252. ರಾಜ್ಯದ ಒಟ್ಟು ಜನಸಂಖ್ಯೆಯ ಪೈಕಿ ಶೇ. 1.08ರಷ್ಟು ಜಿಲ್ಲೆಯಲ್ಲಿ ವಾಸಿಸುತ್ತಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇ. 84.48 ಅಂದರೆ 3,90,225 ಜನರು 1981ರಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಶೇ. 15.52ರಷ್ಟು ಮಾತ್ರ ನಗರ ಪ್ರದೇಶದಲ್ಲಿ ವಾಸ ಮಾಡುತ್ತಿದ್ದರು. ಜಿಲ್ಲೆಯಲ್ಲಿನ ಜನಸಾಂದ್ರತೆ ಪ್ರತಿ ಚ. ಕಿ. ಮೀ.ಗೆ 1991ರಲ್ಲಿ ವಿರಳ ಜನಸಾಂದ್ರತೆ ಇರುವ ಜಿಲ್ಲೆಯಾಗಿದೆ. ಜಿಲ್ಲೆಯು ಮಡಿಕೇರಿ, ಸೋಮವಾರಪೇಟೆ ಮತ್ತು ವಿರಾಜಪೇಟೆಗಳಿಂದ ಕೂಡಿದ್ದು, ಈ ಮೂರು ತಾಲ್ಲೂಕುಗಳು ಒಂದು ಉಪವಿಭಾಗದ ವ್ಯಾಪ್ತಿಯಲ್ಲಿರುತ್ತವೆ. ಮಡಿಕೇರಿಯು ಜಿಲ್ಲೆಯ ಮತ್ತು ಉಪವಿಭಾಗದ ಕೇಂದ್ರ ಸ್ಥಾನವಾಗಿದೆ. ತಾಲ್ಲೂಕುವಾರು ವಿಸ್ತೀರ್ಣದಲ್ಲಿ ವಿರಾಜಪೇಟೆ ತಾಲ್ಲೂಕು 1,646 ಚ. ಕಿ. ಮೀ. ವಿಸ್ತೀರ್ಣ ಹೊಂದಿದ್ದು ಜಿಲ್ಲೆಯ ಚಿಕ್ಕ ತಾಲ್ಲೂಕು ಆಗಿರುತ್ತದೆ. ಮಡಿಕೇರಿ ತಾಲ್ಲೂಕಿನ ವಿಸ್ತೀರ್ಣ 1,449 ಚ. ಕಿ. ಮೀ, ಜಿಲ್ಲೆಯಲ್ಲಿ ಒಟ್ಟು 296 ಗ್ರಾಮಗಳಿದ್ದು, ಅವುಗಳಲ್ಲಿ 288 ಜನವಸತಿ ಇರುವ ಗ್ರಾಮಗಳು ಹಾಗೂ ಎಂಟು ಜನವಸತಿ ಇಲ್ಲದ ಬೇಚರಾಕ್ ಗ್ರಾಮಗಳಾಗಿವೆ. ಈ ಎಲ್ಲಾ ಎಂಟು ಜನ ವಸತಿ ಇಲ್ಲದ ಗ್ರಾಮಗಳು ಸೋಮವಾರಪೇಟೆ ತಾಲ್ಲೂಕಿನಲ್ಲಿವೆ. ಜಿಲ್ಲೆಯ ಮೂರು ತಾಲ್ಲೂಕುಗಳಲ್ಲಿ ಒಟ್ಟು 16 ಹೋಬಳಿಗಳಿವೆ. ಪ್ರತಿ ತಾಲ್ಲೂಕಿನಲ್ಲಿ ತಲಾ ಒಂದೊಂದು ತಾಲ್ಲೂಕು ಪಂಚಾಯಿತಿ ಸಮಿತಿ ಕಾರ್ಯ ನಿರ್ವಹಿಸುತ್ತಿದೆ. ಜಿಲ್ಲಾ ಕೇಂದ್ರವಾದ ಮಡಿಕೇರಿಯಲ್ಲಿ ಮಾತ್ರ ಒಂದು ಪುರಸಭೆ ಕಾರ್ಯ ನಿರ್ವಹಿಸುತ್ತಿದ್ದು, ಜಿಲ್ಲೆಯಲ್ಲಿ ಒಟ್ಟು 65 ಮಂಡಲ ಪಂಚಾಯಿತಿಗಳು ಕಾರ್ಯನಿರ್ವಹಿಸುತ್ತಿವೆ. ಜಿಲ್ಲೆಯಲ್ಲಿ ಒಟ್ಟು 10 ಪಟ್ಟಣಗಳಿವೆ. ಜಿಲ್ಲೆಯ ಒಟ್ಟು 65 ಮಂಡಲ ಪಂಚಾಯಿತಿಗಳಲ್ಲಿ 15 ಮಡಿಕೇರಿ ತಾಲ್ಲೂಕಿನಲ್ಲಿಯೂ 24 ಸೋಮವಾರಪೇಟೆ ತಾಲ್ಲೂಕಿನಲ್ಲಿಯೂ ಹಾಗೂ 26 ವಿರಾಜಪೇಟೆ ತಾಲ್ಲೂಕಿನಲ್ಲಿಯೂ ಇವೆ.

ಕೊಡಗು ಜಿಲ್ಲೆಯಲ್ಲಿ ಕಂದಾಯ ಗ್ರಾಮದ ಪರಿಕಲ್ಪನೆ ನೆರೆಯ ಜಿಲ್ಲೆಗಳಲ್ಲಿರುವ ಕಂದಾಯ ಗ್ರಾಮದ ಪರಿಕಲ್ಪನೆಗಿಂತ ಸ್ವಲ್ಪ ಭಿನ್ನವಾಗಿದೆ. ಪ್ರತ್ಯೇಕ ಗ್ರಾಮದ ನಕ್ಷೆ ಮತ್ತು ದಾಖಲೆಗಳನ್ನು ಹೊಂದಿದ್ದ ಗ್ರಾಮಗಳನ್ನು ಕೂಡ ನಿಯತಕಾಲಿಕವಾಗಿ ಕಡಿಮೆ ಸಂಖ್ಯೆಯ ಪ್ರಮುಖ ಗ್ರಾಮಗಳನ್ನಾಗಿ, ಅಭಿವೃದ್ಧಿ ಸಾಧ್ಯವಾದ ಘಟಕಗಳನ್ನಾಗಿ ವಿಂಗಡಿಸುವ ಕೆಲಸ ಕೊಡಗಿನಲ್ಲಿ ನಡೆದಿದೆ. ಉದಾಹರಣೆಗೆ 1901ರಲ್ಲಿ ಕೊಡಗಿನ ಜನವಸತಿ ಇರುವ ಗ್ರಾಮಗಳ ಸಂಖ್ಯೆ 479 ಇದ್ದದ್ದು 1981ರಲ್ಲಿ ಈ ಸಂಖ್ಯೆ 288ಕ್ಕೆ ಇಳಿಯಿತು. ಕೆಲವೊಂದು ಪ್ರಕರಣಗಳಲ್ಲಿ ಈ ರೀತಿ ಸಂಯೋಜಿಸಿದ ಗ್ರಾಮಗಳ ಹೆಸರುಗಳನ್ನು ಸಹ ಬದಲಾಯಿಸಿ ಹೊಸ ಹೆಸರನ್ನು ಕೊಟ್ಟಿರುವ ಉದಾಹರಣೆಗಳಿವೆ. ಆದರೂ ಸಂಯೋಜಿತ ಗ್ರಾಮಗಳ ನಕ್ಷೆಗಳನ್ನು ಪ್ರತ್ಯೇಕವಾಗಿ ತಯಾರಿಸಿಲ್ಲ ಮತ್ತು ದಾಖಲೆಗಳನ್ನು ಮೂಲ ಗ್ರಾಮಗಳ ಹೆಸರಿನಲ್ಲೆ ದಾಖಲೆ ಮಾಡಲಾಗುತ್ತಿದೆ. ಈ ರೀತಿ ವಿಲೀನಗೊಂಡ ಗ್ರಾಮಗಳನ್ನು ಉಪಗ್ರಾಮಗಳೆಂದು ಕರೆಯುವ ವಾಡಿಕೆ ಬೆಳೆದು ಬಂದಿದೆ. ಉಪಗ್ರಾಮಗಳನ್ನು ಪ್ರತ್ಯೇಕ ಅಸ್ತಿತ್ವ ಇಲ್ಲದ ಸಣ್ಣ ಹಳ್ಳಿಗಳೆಂದು ನಿರೂಪಿಸಲಾಗಿದೆ. ಅದೇ ರೀತಿ ಬಯಲುನಾಡಿನಲ್ಲಿ ಇರುವಂತೆ ಸಣ್ಣ ಹಳ್ಳಿ ಎಂದರೆ ಪ್ರಮುಖ ಗ್ರಾಮದಿಂದ ಸ್ವಲ್ಪ ದೂರ ಇರುವ ಮನೆಗಳ ಗುಂಪು ಎಂಬ ಪರಿಕಲ್ಪನೆ ಮಲೆನಾಡಿನ ಪ್ರದೇಶದಲ್ಲಿ ಅನ್ವಯವಾಗುವುದಿಲ್ಲ. ಜಿಲ್ಲೆಯ ಸ್ವಾಭಾವಿಕ ಲಕ್ಷಣಗಳು, ವಿಶಿಷ್ಟ ಹವಾಗುಣ ಹಾಗೂ ವಿವಿಧ ಸಾಮಾಜಿಕ ಪದ್ಧತಿಗಳಿಗೆ ಅನುಗುಣವಾಗಿ ಮನೆಗಳ

ಆತ್ಮವಿಶ್ವಾಸ ಇಲ್ಲದಾಗ ಕೀಳರಿಮೆ ಮೂಡುತ್ತದೆ.

# ಆರೋಗ್ಯ ಭಾಗ್ಯ : ಅಲ್ಟ್ರಾ ಸೌಂಡ್ ಸ್ಕ್ಯಾನಿಂಗ್ (Ultra Sound Scaning)

'ಹೊಟ್ಟೆಯ ಕೆಳಭಾಗದಲ್ಲಿ ನೋವಿದೆಯೆಂದು ವೈದ್ಯರ ಬಳಿ ಹೋದೆ. ಮೂತ್ರ ಪರೀಕ್ಷೆಯ ನಂತರ ವೈದ್ಯರು ಮೂತ್ರನಾಳದಲ್ಲಿ ಕಲ್ಲು ಇದೆಯೇ ಎಂಬುದನ್ನು ತಿಳಿಯಲು ಸ್ಕ್ಯಾನಿಂಗ್ ಮಾಡಿಸಲು ಹೇಳಿದರು'.

'ಗರ್ಭಕೋಶದಲ್ಲಿ ಬೆಳೆಯುತ್ತಿರುವ ಮಗುವಿನ ಪರೀಕ್ಷೆ ಮಾಡಿಸಿಕೊಳ್ಳಲು ವೈದ್ಯರ ಬಳಿ ಹೋದೆ. ಮಗುವಿನ ಬೆಳವಣಿಗೆ, ವಯಸ್ಸು ತಿಳಿಯಲು ವೈದ್ಯರು ಸ್ಕ್ಯಾನಿಂಗ್ ಮಾಡಿಸಲು ಹೇಳಿದರು'.

ಇವು ಸಾಮಾನ್ಯವಾಗಿ ಇಂದು ರೋಗಿಗಳು ಹೇಳುವ ಮಾತುಗಳು. ಇಂದು ಸ್ಕ್ಯಾನಿಂಗ್ ವೈದ್ಯಕೀಯ ಪರೀಕ್ಷಾ ವಿಭಾಗದ ಅವಿಭಾಜ್ಯ ಅಂಗವಾಗಿದೆ.

ಅಲ್ಟ್ರಾಸೌಂಡ್ ಸ್ಕ್ಯಾನಿಂಗ್‌ನಲ್ಲಿ ಕಿವಿಗೆ ಕೇಳುವ ಮಟ್ಟಕ್ಕಿಂತ ಹೆಚ್ಚಿನ ಮಟ್ಟದ ಶಬ್ದದ ಅಲೆಗಳು ದೇಹವನ್ನು ಪ್ರವೇಶಿಸಿ, ಅವು ಮೂಳೆ, ಇತರ ಅಂಗಾಂಗಗಳು, ಗೆಡ್ಡೆ ಇತ್ಯಾದಿಗಳಿಂದ ಪ್ರತಿಫಲನಗೊಂಡು ಪರದೆಯ ಮೇಲೆ ಚಿತ್ರದ ರೂಪದಲ್ಲಿ ನೋಡಬಹುದಾಗಿದೆ.

ಗರ್ಭಿಣಿಯರ ಹಾಗೂ ಸ್ತ್ರೀ ರೋಗಿಗಳ ಪರೀಕ್ಷೆಯಲ್ಲಿ ಸ್ಕ್ಯಾನಿಂಗ್‌ನ ಪಾತ್ರ ಪ್ರಾಮುಖ್ಯವಾದುದು. ಗರ್ಭ ಧರಿಸಿದ 5ನೇ ವಾರದಲ್ಲೇ ಬೆಳೆಯುತ್ತಿರುವ ಭ್ರೂಣವನ್ನು ಸ್ಕ್ಯಾನಿಂಗ್ ಮೂಲಕ ನೋಡಬಹುದು. ಗರ್ಭ ಧರಿಸಿದ 7ನೇ ವಾರದಲ್ಲಿ ಮಗುವಿನ ಬಡಿತವನ್ನು ಸ್ಕ್ಯಾನಿಂಗ್‌ನಿಂದ ತಿಳಿಯಬಹುದು. ಆದ್ದರಿಂದ 7ನೇ ವಾರದ ನಂತರ ಮಗುವು ಜೀವಿತವಾಗಿದೆಯೇ ? ಇಲ್ಲವೆ ? ಎಂಬುದನ್ನು ಸುಲಭವಾಗಿ ಕಂಡುಹಿಡಿಯಬಹುದು. ಮಗುವಿನ ಬೆಳವಣಿಗೆ ತಿಳಿಯಲು ಸ್ಕ್ಯಾನಿಂಗ್ ಬಹಳ ಉಪಯುಕ್ತವಾದುದು. ತಿಂಗಳಿಗೆ ಸರಿಯಾಗಿ ಮಗು ಬೆಳೆಯುತ್ತಿದೆಯೆ ? ಮಗುವಿನ ದೇಹದ ಅಂಗಾಂಗ, ಮೂಳೆ, ತಲೆ - ಇತ್ಯಾದಿಗಳ ಅಳತೆಯಿಂದ ಅತ್ಯಂತ ನಿಖರವಾಗಿ ಮಗುವಿನ ವಯಸ್ಸನ್ನು ಹೇಳಬಹುದು. ಯಾವುದೇ ಅಂಗಾಂಗ ದೋಷಗಳಿದ್ದಲ್ಲಿ ತಿಳಿಯಬಹುದು. ಮಗು ಗಂಡೋ, ಹೆಣ್ಣೊ ಎಂಬ ಅಂಶ ಸಹ ಸ್ಕ್ಯಾನಿಂಗ್ ಮೂಲಕ ಪತ್ತೆ ಹಚ್ಚಬಹುದು.

ಮೂತ್ರಜನಕಾಂಗ, ಮೂತ್ರನಾಳ, ಮೂತ್ರಕೋಶ, ಪಿತ್ತಕೋಶಗಳಲ್ಲಿ ಕಲ್ಲುಗಳಿವೆಯೆ ? ಎಂಬುದನ್ನು ಪತ್ತೆ ಹಚ್ಚುವಲ್ಲಿ ಸ್ಕ್ಯಾನಿಂಗ್ ಬಹಳ ಸಹಕಾರಿಯಾಗಿದೆ. ಅತಿ ಚಿಕ್ಕದಾದ ಕಲ್ಲುಗಳನ್ನು ಸಹ ಇದರಲ್ಲಿ ನೋಡಬಹುದು.

ಯಕೃತ್ (Liver)ಗೆ ಸಂಬಂಧಿಸಿದ ಕಾಯಿಲೆಗಳನ್ನು ಸ್ಕ್ಯಾನಿಂಗ್‌ನಿಂದ ತಿಳಿಯಬಹುದು.

ಆದರೆ ಜಠರ, ಸಣ್ಣ ಹಾಗೂ ದೊಡ್ಡ ಕರುಳಿನ ಹಾಗೆಯೇ ಮೂಳೆಗಳ, ತಲೆಬುರುಡೆಯ ಒಳಗಿನ ಕಾಯಿಲೆಗಳನ್ನು ಅಲ್ಟ್ರಾಸೌಂಡ್ ಸ್ಕ್ಯಾನಿಂಗ್ ಮೂಲಕ ಕಂಡುಹಿಡಿಯಲಾಗುವುದಿಲ್ಲ. ಇದನ್ನು C. T. ಸ್ಕ್ಯಾನ್ ಮೂಲಕ ತಿಳಿಯಬಹುದಾಗಿದೆ.

ಅಲ್ಟ್ರಾಸೌಂಡ್ ಸ್ಕ್ಯಾನಿಂಗ್‌ನಿಂದ ದೇಹಕ್ಕೆ ಯಾವುದೇ ತೊಂದರೆಯಾಗುವುದಿಲ್ಲ. X-ray (ಕ್ಷ ಕಿರಣ)ಯಂತೆ ವಿಕಿರಣದ ಭಯ ಇಲ್ಲ. ಈ ಎಲ್ಲಾ ಕಾರಣಗಳಿಂದ ಸ್ಕ್ಯಾನಿಂಗ್ ಇಂದು ಸಾಮಾನ್ಯ ಪರೀಕ್ಷಾ ವಿಧಾನವಾಗಿದೆ.

- ಡಾ॥ ಪ್ರವೀಣ ಯಸ್.ಎಸ್. MD, DNB ಕ್ಯಾಲಿಕಟ್, ಕೇರಳ

---

ಹಿಂದಿನ ಪುಟದಿಂದ

ಗುಂಪುಗಳು ಒಂದು ಗ್ರಾಮದ ಎಲ್ಲೆಯೊಳಗೆ ಹರಡಿರಬಹುದು. ಅಥವಾ ಮನೆಗಳ ಗುಂಪುಗಳು ಎರಡು ಮೂರು ಗ್ರಾಮಗಳ ಎಲ್ಲೆಯೊಳಗೆ ಕೂಡ ಇರುವ ಸಂದರ್ಭಗಳು ಉಂಟು. ಹಾಗಾಗಿ ಪ್ರತ್ಯೇಕ ನಕ್ಷೆ ಇರುವ ಉಪಗ್ರಾಮಗಳನ್ನು ಸ್ವತಂತ್ರ ಗ್ರಾಮಗಳನ್ನಾಗಿ ಪರಿಗಣಿಸಿದರೆ (ಮೂಲ ಭೂಮಾಪನದಿಂದ ಪ್ರತ್ಯೇಕ ನಕ್ಷೆ ಇರುವ ಉಪಗ್ರಾಮಗಳು) ಕೊಡಗಿನಲ್ಲಿ 1981ರ ಜನಗಣತಿ ವರದಿಯಂತೆ ಒಟ್ಟು 538 ಘಟಕಗಳನ್ನು ಗುರುತಿಸಬಹುದು. ತಾಲ್ಲೂಕುವಾರು ಘಟಕಗಳನ್ನು ಕೆಳಕಂಡಂತೆ ವಿಂಗಡಿಸಬಹುದು. ಮಡಿಕೇರಿ 97, ಸೋಮವಾರಪೇಟೆ 315 ಮತ್ತು ವಿರಾಜಪೇಟೆ 127.

ಮಡಿಕೇರಿ ತಾಲ್ಲೂಕಿನಲ್ಲಿ ನಾಲ್ಕು ಹೋಬಳಿಗಳಿದ್ದು, ಮಡಿಕೇರಿ ಹೋಬಳಿ 22 ಗ್ರಾಮಗಳು, ಸಂಪಾಜೆ ಹೋಬಳಿಯ 11 ಗ್ರಾಮಗಳು, ಭಾಗಮಂಡಲ ಹೋಬಳಿಯ 15 ಗ್ರಾಮಗಳು, ನಾಪೋಕ್ಲು ಹೋಬಳಿಯ 19 ಗ್ರಾಮಗಳು ಸೇರಿವೆ. ಒಟ್ಟು 67 ಗ್ರಾಮಗಳ 15 ಮಂಡಲ ಪಂಚಾಯ್ತಿಗಳಿವೆ.

ಸೋಮವಾರಪೇಟೆ ತಾಲ್ಲೂಕಿನಲ್ಲಿ ಸೋಮವಾರಪೇಟೆ ಹೋಬಳಿಯ 21 ಗ್ರಾಮಗಳು, ಶಾಂತಳ್ಳಿ ಹೋಬಳಿಯ 12 ಗ್ರಾಮಗಳು, ಕೊಡ್ಲಿಪೇಟೆ ಹೋಬಳಿಯ 29 ಗ್ರಾಮಗಳು, ಶನಿವಾರಸಂತೆ ಹೋಬಳಿಯ 28 ಗ್ರಾಮಗಳು, ಕುಶಾಲನಗರ ಹೋಬಳಿಯ 25 ಗ್ರಾಮಗಳು, ಸುಂಟಿಕೊಪ್ಪ ಹೋಬಳಿಯ 19 ಗ್ರಾಮಗಳು ಸೇರಿವೆ. ಒಟ್ಟು 134 ಗ್ರಾಮಗಳ 24 ಮಂಡಲ ಪಂಚಾಯ್ತಿಗಳಿವೆ.

ವಿರಾಜಪೇಟೆ ತಾಲ್ಲೂಕಿನ, ವೀರಾಜಪೇಟೆ ಹೋಬಳಿಯ 23 ಗ್ರಾಮಗಳು ಅಮ್ಮತಿ ಹೋಬಳಿಯ 23 ಗ್ರಾಮಗಳು, ಪೊನ್ನಂಪೇಟೆ ಹೋಬಳಿಯ 18 ಗ್ರಾಮಗಳು, ಬಾಳೆಲೆ ಹೋಬಳಿಯ 9 ಗ್ರಾಮಗಳು, ಶ್ರೀಮಂಗಲ ಹೋಬಳಿಯ 12 ಗ್ರಾಮಗಳು, ಹುದಿಕೇರಿ ಹೋಬಳಿಯ 10 ಗ್ರಾಮಗಳು ಒಟ್ಟು 95 ಗ್ರಾಮಗಳ 26 ಮಂಡಲ ಪಂಚಾಯ್ತಿಗಳಿವೆ.

- ಪ್ರಾದೇಶಿಕ ಬದಲಾವಣೆಗಳು.

ಮುಂದಿನ ಸಂಚಿಕೆಯಲ್ಲಿ : - ಸಂಗಾತಿ

---

# ಆಯುರ್ವೇದ ಚಿಕಿತ್ಸೆ

***ಸೊಂಟ ನೋವು :*** ಇದೊಂದು ಸಾಮಾನ್ಯ ಸಮಸ್ಯೆ ಯಾಗಿದೆ. ಆದರೆ ನೋವಿನ ತೀವ್ರತೆ ಅದರ ಕಾರಣಗಳ ಮೇಲೆ ಅವಲಂಬಿತವಾಗಿರುತ್ತದೆ.

***ಕಾರಣಗಳು :-*** ವ್ಯಕ್ತಿ ಕುಳಿತುಕೊಳ್ಳುವ ಅಥವಾ ಮಲಗುವ ಭಂಗಿ, ಅತಿಯಾದ ದೇಹ ತೂಕ, ಕೆಲವೊಮ್ಮೆ ಗರ್ಭಿಣಿ ಅವಸ್ಥೆ, ಅತಿಯಾದ ಕೆಲಸ, ವಾಹನ ಚಾಲನೆ, ಸೊಂಟಕ್ಕೆ ಬಿದ್ದ ಪೆಟ್ಟುಗಳು, ಅತಿಯಾಗಿ ಭಾರ ಎತ್ತುವುದು, ಬೆನ್ನು ಮೂಳೆಯ ತೊಂದರೆಗಳು, ಮೂಳೆ ಸವೆತ ನಂಜಾಗುವುದು (Infection). ಮೂಳೆ ಪೊಳ್ಳಾಗುವುದು, ಡಿಸ್ಕ್‌ಸ್ಲಿಪ್, ಹಾರ್ಮೋನುಗಳ ಏರುಪೇರು, ಸ್ತ್ರೀಯರಲ್ಲಿ ಬಿಳಿಮುಟ್ಟು, ಕೆಲವೊಮ್ಮೆ ಮೂಳೆಗೆ ಸಂಬಂಧಿಸಿದ ಕ್ಯಾನ್ಸರ್ ಸಹ ಸೊಂಟ ನೋವಿಗೆ ಕಾರಣವಾಗಬಹುದು.

***ಲ್ಯಾಬ್ ಟೆಸ್ಟ್‌ಗಳು ಹಾಗು ರೋಗ ನಿರ್ಣಯ :-*** ಸಾಮಾನ್ಯ ಲಕ್ಷಣಗಳು, ಕಾರಣಗಳು (History) ಹಾಗು ರೋಗಿ ಪರೀಕ್ಷೆಯಿಂದ ರೋಗವನ್ನು ನಿರ್ಣಯಿಸಬಹುದಾಗಿದೆ. ರೋಗದ ಗಂಭೀರತೆಯನ್ನು ನಿರ್ಧರಿಸಲು ಕೆಲವೊಮ್ಮೆ MRJ, X-ray, E.S.R, R. A. factor ಮುಂತಾದ ಟೆಸ್ಟ್‌ಗಳು ನೆರವಾಗುತ್ತವೆ. ಆಯುರ್ವೇದದಲ್ಲಿ ಸೊಂಟ ನೋವಿಗೆ ಮುಖ್ಯವಾಗಿ ವಾತದೋಷ (ವಾಯು) ಕಾರಣವೆಂದು ಪರಿಗಣಿಸಲಾಗಿದ್ದು, ಕಫ ಹಾಗು ಪಿತ್ತ ದೋಷಗಳ ಪಾತ್ರವನ್ನು ನೋಡಿಕೊಂಡು ಚಿಕಿತ್ಸೆಯನ್ನು ನೀಡಲಾಗುವುದು.

***ಚಿಕಿತ್ಸೆ :*** (1) ಪಂಚಕರ್ಮ ವಿವಿಧ ತೈಲಗಳಿಂದ (ರೋಗ ಹಾಗು ರೋಗಿಗನುಸಾರವಾಗಿ) ಅಭ್ಯಂಗ (Oil massage), ವಿವಿಧ ಗಿಡಮೂಲಿಕೆಗಳಿಂದ ಶಾಖ, ನಾಡೀಸ್ವೇದ (ಮೂಲಿಕೆಗಳನ್ನು ನೀರಿನಲ್ಲಿ ಬೇಯಿಸಿ, ಬಂದ ಆವಿಯಿಂದ ಶಾಖ) ಕಟಿಬಸ್ತಿ (ಸೊಂಟದಲ್ಲಿ ಉದ್ದಿನಹಿಟ್ಟಿನ ಕಟ್ಟೆ ನಿರ್ಮಿಸಿ ಮಧ್ಯದಲ್ಲಿ ಎಣ್ಣೆ ತುಂಬಿಸಿ ನೀಡುವ ಚಿಕಿತ್ಸೆ) ಉಪನಾಹ (ಧಾನ್ಯಗಳನ್ನು ಬೇಯಿಸಿ ಸೊಂಟಕ್ಕೆ ಲೇಪಿಸುವುದು).

***(2) ಶಮನ ಚಿಕಿತ್ಸೆ :*** ಅರಿಷ್ಠಗಳು ಹಾಗು ಕಷಾಯಗಳು :- ಬಲಾರಿಷ್ಠ, ಅಶ್ವಗಂಧಾರಿಷ್ಠ, ದಶಮೂಲಕ್ವಾಥ, ಮಹಾರಾಸ್ನಾದಿಕ್ವಾಥ, ರಾಸ್ನೇರಂಡಾದಿಕ್ವಾಥ, ಸಹಜರಾದಿಕ್ವಾಥ.

***ಮಾತ್ರೆಗಳು :-*** ಮಹಾಯೋಗರಾಜಗುಗ್ಗುಳು, ರಾಸ್ನಾಗುಗ್ಗುಳು, ಕ್ಷೀರಬಲಾ ಮಾತ್ರೆ, ತ್ರಯೋದಶಾಂಗ ಗುಗ್ಗುಳು, ಬೃಹತ್ ವಾತಚಿಂತಾಮಣಿ.

***ಸೊಂಟ ನೋವಿನಲ್ಲಿ ಉಪಯುಕ್ತ ತೈಲಗಳು :-*** ಮಹಾನಾರಾಯಣ, ಕ್ಷೀರಬಲಾ, ಮಹಾಮಾಷ, ಕೊಟ್ಟಂಚುಕ್ಕಾದಿ, ಪ್ರಭಂಜನ, ಧಾನ್ವಂತರ, ವಿಷಗರ್ಭತೈಲ, ಪಿಂಡತೈಲ ಇತ್ಯಾದಿ.

***ಪಥ್ಯ :-*** ವಿಶ್ರಾಮ, ಎಣ್ಣೆಲೇಪ, ಶಾಖ, ಸ್ನಾನ, ತುಪ್ಪ, ಎಣ್ಣೆ, ಸಿಹಿ ಆಹಾರ, ಹುಳಿ ಆಹಾರ, ಉದ್ದು, ಹಳೆಯ ಅಕ್ಕಿ, ಹುರುಳಿ, ಮಾಂಸರಸ, ಬೆಳ್ಳುಳ್ಳಿ, ಮೊಸರು, ದ್ರಾಕ್ಷಿ, ತಾಂಬೂಲ.

***ಅಪಥ್ಯ :-*** ಅತಿ ಕೆಲಸ, ವ್ಯಾಯಾಮ, ಚಿಂತೆ, ರಾತ್ರಿ ಜಾಗರಣೆ, ಬೇಳೆಗಳು.

***ಚಿಕಿತ್ಸಾ ಸಮಯ :-*** ಸಾಮಾನ್ಯವಾಗಿ ಪಂಚಕರ್ಮ ಚಿಕಿತ್ಸೆಯ ಅವಧಿ 14 ರಿಂದ 21 ದಿನಗಳು. ನಂತರ ಶಮನ ಔಷಧಿಯನ್ನು 1 ತಿಂಗಳ ಕಾಲ ಸೇವಿಸಬೇಕು. ವಿಶ್ರಾಂತಿ ಇತ್ಯಾದಿ ಪಥ್ಯಗಳನ್ನು 1 ತಿಂಗಳ ಕಾಲ ಪಾಲಿಸಬೇಕು.

**ಡಾ|| ಭಾರತಿ. ಎ. ಪಿ. ಎಂ.ಡಿ. (ಆಯು) ಮಡಿಕೇರಿ**

# ಡಯಾಬಿಟಿಸ್ (ಸಕ್ಕರೆ ಕಾಯಿಲೆ) ರೋಗದ ನಿವಾರಣೋಪಾಯಗಳು



ನಮ್ಮ ಶರೀರದಲ್ಲಿ ಮೇದೋಜ್ಜೀರಕ ಗ್ರಂಥಿಗಳು (ಪೆಂಕ್ರಿಯಾಸ್) ಇನಸ್ಯೂಲಿನ್ ಉತ್ಪಾದಿಸಿ ಸಕ್ಕರೆ ಅಥವಾ ಗ್ಲೂಕೋಜನ್ನು ನಿಯಂತ್ರಿಸು ತ್ತವೆ. ಈ ಮೇದೋಜ್ಜೀರಕ ಗ್ರಂಥಿಗಳು ತಮ್ಮ ಕಾರ್ಯಕ್ಷಮತೆಯನ್ನು ಕಳೆದುಕೊಂಡಾಗ ಶರೀರದಲ್ಲಿ ಸಕ್ಕರೆ ಅಥವಾ ಗ್ಲುಕೋಜಿನ ಪ್ರಮಾಣದ ನಿಯಂತ್ರಣ ತಪ್ಪುವುದರಿಂದ ಈ ಕಾಯಿಲೆಯು ಪ್ರಾರಂಭ ವಾಗುವುದು. ರಕ್ತದಲ್ಲಿ ಗ್ಲುಕೋಜನ್ (ಸಕ್ಕರೆ) ಪ್ರಮಾಣ ಹೆಚ್ಚಾಗುವುದು. ***ಡಯಾಬಿಟೀಸ್‌ನ್ನು ನಿಧಾನ ಮಾಡಲು ಶಮನೋಪಾಯಗಳು*** : ಮೇದೋ ಜ್ಜೀರಕ ಗ್ರಂಥಿಯು ತನ್ನ ಕಾರ್ಯಕ್ಷಮತೆಯನ್ನು ಕಳೆದುಕೊಂಡ ಕೂಡಲೇ ತಡಮಾಡದೇ ಪ್ರೇಂಕ್ರಿಯಾಸ್ (ಮೇದೋಜ್ಜೀರಕ) ಗ್ರಂಥಿಗೆ ನಿಯಮಿತವಾಗಿ ಆಕ್ಯೂಪ್ರೆಜರ್ ಚಿಕಿತ್ಸೆಯನ್ನು ಪ್ರಾರಂಭಿಸಬೇಕು. ಇದರ ಜೊತೆ ಲಿಂಪ್ ಗ್ರಂಥಿಗೆ (ಮೇದಸ್ಸು ಗ್ರಂಥಿ) ಮತ್ತು ಎಲ್ಲಾ ಇಂಡೋಕ್ರೈನ್ ಗ್ರಂಥಿಗಳಿಗೆ ನಿಯಮಿತವಾಗಿ ಚಿಕಿತ್ಸೆಯನ್ನು ಪ್ರಾರಂಭಿಸಬೇಕು.

***ಡಯಾಬಿಟೀಸ್ ಕಂಟ್ರೋಲ್ ಮಾಡಲು ಇನ್ನು ಕೆಲವು ಶಮನೋಪಾಯಗಳು :***

1. ಬೆಂಡೇಕಾಯಿಯನ್ನು ಉದ್ದವಾಗಿ ಕತ್ತರಿಸಿ, ಒಂದು ಗ್ಲಾಸ್ ನೀರಿನಲ್ಲಿ ರಾತ್ರಿಯಿಡೀ ಮುಳುಗಿಸಿಡಬೇಕು. ಬೆಳಿಗ್ಗೆ ಪ್ರಪ್ರಥಮವಾಗಿ ಬೀಜಗಳನ್ನು ನೀರಿನಿಂದ ಸೋಸಿ ಆ ನೀರನ್ನು ಕುಡಿಯಬೇಕು. ಆ ನಂತರ ಒಂದು ತಾಸಿನವರೆಗೆ ಏನನ್ನೂ ತೆಗೆದುಕೊಳ್ಳಬಾರದು. 2. ಕೊತ್ತಂಬರಿ ಸೊಪ್ಪಿನ ರಸವನ್ನು ಖಾಲಿ ಹೊಟ್ಟೆಯಲ್ಲಿ 25 ರಿಂದ 30 ದಿವಸದವರೆಗೆ ಕುಡಿಯಬೇಕು. (50 ರಿಂದ 60 ಗ್ರಾಂ) 3) 10 ರಿಂದ 12 ಮಾವಿನ ಎಲೆಯನ್ನು ಅರ್ಧ ಗಂಟೆಯಿಂದ ಒಂದು ಗಂಟೆಯವರೆಗೆ ನೀರಿನಲ್ಲಿಟ್ಟು ಎಲೆಯಿಂದ ರಸ ತೆಗೆದು ಸೋಸಿ 25 ರಿಂದ 30 ದಿವಸದವರೆಗೆ ಕುಡಿಯಬೇಕು. ಮೇಲಿನ ಚಿಕಿತ್ಸೆಗಳಲ್ಲಿ ಯಾವುದಾದರೂ ಒಂದನ್ನು ಪ್ರಾರಂಭಿಸಿ ಕೆಲವು ದಿನ ಬಿಟ್ಟು ಅನಂತರ ಬೇಕಾದಲ್ಲಿ ಮಾತ್ರ ಇನ್ನೊಂದನ್ನು ಪ್ರಾರಂಭಿಸಬಹುದು. 4) 1 ಗ್ರಾಂ ಚಿನ್ನದ ಮತ್ತು ಬೆಳ್ಳಿಯ ಹಾಗೂ ತಾಮ್ರದ ಧಾತುಗಳನ್ನು 4 ಗ್ಲಾಸ್ ನೀರಿನಲ್ಲಿ ತೆಗೆದುಕೊಂಡು, 2 ಗ್ಲಾಸ್ ನೀರು ಆಗುವವರೆಗೆ ಕುದಿಸಿರಿ ಬೆಳಿಗ್ಗೆ, ಸಂಜೆ ಕುಡಿಯುವುದು ಅತೀ ಅಗತ್ಯ. ಈ ಎಲ್ಲಾ ಸಮಯದಲ್ಲಿ ಪೆಂಕ್ರಿಯಾಸ್ ಮತ್ತು ಲಿಂಪ್ ಗ್ರಂಥಿ ಗಳಿಗೆ ಹಾಗೂ ಎಂಡೋಕ್ರೈನ್ ಗ್ರಂಥಿಗಳಿಗೆ ನಿಯಮಿತವಾಗಿ ಆಕ್ಯೂಪ್ರೆಜರ್ ಚಿಕಿತ್ಸೆ ಕೊಡುತ್ತಿರಬೇಕು.

ಅಲೋಪತಿ ಚಿಕಿತ್ಸೆ ಪಡೆಯುತ್ತಿರುವವರು ಒಮ್ಮೆಗೆ ತಮ್ಮ ಅಲೋಪತಿ ಔಷಧಿಗಳನ್ನು ನಿಲ್ಲಿಸದೆ, ಹಂತ ಹಂತವಾಗಿ ಆಕ್ಯೂಪ್ರೆಜರ್ ಚಿಕಿತ್ಸೆಯ ನಂತರ ಹಾಗೂ ಮೂರು ಧಾತುಗಳನ್ನು ಕುದಿಸಿ ನೀರು ಕುಡಿದ ಸ್ವಲ್ಪ ದಿನಗಳ ನಂತರ, ಮೇಲೆ ತಿಳಿಸಿದ ನೈಸರ್ಗಿಕ ಚಿಕಿತ್ಸೆಗಳನ್ನು ಪ್ರಾರಂಭಿಸಿದಂತೆ ಹಂತ ಹಂತವಾಗಿ ಅಲೋಪತಿ ಔಷಧಿಗಳನ್ನು ಕಡಿಮೆ ಮಾಡುತ್ತಾ ಬರಬೇಕು. ಮೇಲಿನ ಆಕ್ಯುಪ್ರೆಜರ್ ಚಿಕಿತ್ಸೆ ಹಾಗೂ ನೈಸರ್ಗಿಕ ಚಿಕಿತ್ಸೆಯಿಂದ ಶರೀರದ ಎಲ್ಲಾ ಗ್ರಂಥಿಗಳೂ ತಮ್ಮ ಕಾರ್ಯವನ್ನು ಚೆನ್ನಾಗಿ ಮಾಡಲಾರಂಭಿಸುವುದಲ್ಲದೇ ಅಲೋಪತಿ ಮಾತ್ರೆಗಳ ದುಷ್ಪರಿಣಾಮ ನಿವಾರಣೆಯಾಗುವುದು. ಡಯಾಬಿಟಿಸ್ ರೋಗವನ್ನು ಕಂಟ್ರೋಲ್ ಕೂಡಲೇ ಮಾಡದಿದ್ದರೆ ಇತರ ಅನೇಕ ತೊಂದರೆಗಳಿಗೆ ನಾಂದಿಯಾಗುವ ಸಂಭವಗಳಿರುವವು. ಆದುದರಿಂದ ಈ ರೋಗದ ನಿಧಾನಕ್ಕೆ ಅಥವಾ ಕಂಟ್ರೋಲಿಗೆ ಮೇಲೆ ತಿಳಿಸಿದ ಚಿಕಿತ್ಸೆಯು ಅತ್ಯಂತ ಉಪಯೋಗಿಯಾಗಿದೆ.

**- ರಾಪ್ ಜ್ಯೋತಿಷಿ, ಮನಶಕ್ತಿ ಪತ್ರಿಕೆ**

ಆತ್ಮವಿಶ್ವಾಸ ಉಳ್ಳವನು-ವಿನಯವನ್ನು ಕಳೆದುಕೊಳ್ಳಬಾರದು.

## ಜೀವವಿಮಾ ನಿಗಮದಲ್ಲಿ ಕೋಟ್ಯಾಧಿಪತಿ ಆದ ಶ್ರೀಮತಿ ಬೇಬಿಯವರ ಅನಿಸಿಕೆಗಳು


ಶ್ರೀಮತಿ ಬೇಬಿ

ಸಮಾಜದಲ್ಲಿ ಹೆಣ್ಣಿನ ಸ್ಥಾನವೇನು ? ಕೇವಲ ಮನೆಯ ನಾಲ್ಕು ಗೋಡೆಗಳ ಮಧ್ಯೆ ಮಾತ್ರವೇ ? ಖಂಡಿತ ಇಲ್ಲ. ಅದರ ಆಚೆಗೂ ಆಕೆಗೆ ವ್ಯಕ್ತಿತ್ವ ಇದೆ ಹಾಗೂ ಸಹಕಾರ ಇದ್ದಲ್ಲಿ ಆಕೆ ಕೂಡ ತನ್ನ ಸ್ವಸಾಮರ್ಥ್ಯದಿಂದ ಗಂಡಿಗೆ ಸರಿಸಮನಾಗಿ ಸಾಧನೆಗೈಯಬಹುದು ಎಂಬುದಕ್ಕೆ ನಿದರ್ಶನ ಶ್ರೀಮತಿ ಕೊಂಪುಳೀರ ಬೇಬಿ ಮುತ್ತಪ್ಪನವರು.

ಮಡಿಕೇರಿ ತಾಲ್ಲೂಕಿನ ಕೋಪಟ್ಟಿ ಗ್ರಾಮದಲ್ಲಿ ಜನಿಸಿದ ಶ್ರೀಮತಿಬೇಬಿಯವರು ಗ್ರಾಮೀಣ ಹಿನ್ನಲೆ ಉಳ್ಳವರು ಹಾಗೂ ಬದುಕಿನ ಕಹಿ ಸತ್ಯವನ್ನು ಅರಿತವರು. ಬದುಕಿನಲ್ಲಿ ಉನ್ನತಿ ಗೇರಲು ಸಾಧನೆಯೊಂದೇ ಮಾರ್ಗವೆಂದು ತಿಳಿದವರು. ಇವರು ವಿವಾಹವಾದದ್ದು 1991ರಲ್ಲಿ ಮಡಿಕೇರಿ ನ್ಯಾಯಾಲಯದಲ್ಲಿ ನೌಕರರಾಗಿದ್ದ ಐಕೋಳ ಗ್ರಾಮದ ಕೊಂಪುಳೀರ ಕುಟ್ಟಪ್ಪನವರ ಮಗ ಮುತ್ತಪ್ಪನವರನ್ನು. ತದನಂತರ ತಮ್ಮ ಪತಿಗೆ ಬೆಂಗಳೂರಿಗೆ ನಗರ ಸಿವಿಲ್ ನ್ಯಾಯಾಲಯಕ್ಕೆ ವರ್ಗವಾದಾಗ ಸಂಸಾರ ಸಮೇತ ಬೆಂಗಳೂರಿಗೆ ಬಂದರು. ಬದುಕಿನಲ್ಲಿ ಏನನ್ನಾದರೂ ಸಾಧಿಸಲೇ ಬೇಕೆಂಬ ಛಲವಿದ್ದ ಬೇಬಿಯವರು 1994ರಲ್ಲಿ ಭಾರತೀಯ ಜೀವ ವಿಮಾ ನಿಗಮದ ಏಜನ್ಸಿ ಪಡೆದುಕೊಂಡರು. ಬದುಕಿಗೆ ನೆಮ್ಮದಿ ನೀಡುವ ಜೀವ ವಿಮೆ ಮಾಡಿಸುವಲ್ಲಿ ಜನರು ಉತ್ಸಾಹದಿಂದ ಪಾಲ್ಗೊಳ್ಳುವಂತೆ ಮಾಡಿದರು. ಈ ವಿಷಯದಲ್ಲಿ ಸಂಪೂರ್ಣವಾಗಿ ಯಶಸ್ವಿಯಾದರು. ಬೆಂಗಳೂರಿನ ಸಿವಿಲ್ ಸ್ಟೇಷನ್ ಬ್ರಾಂಚ್, ಓರಿಯಂಟಲ್ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ ಬೆಂಗಳೂರು ವಿಭಾಗಕ್ಕೆ ಸೇರಿದಂತೆ ಇವರ ಸಾಧನೆ ಮಾರ್ಚ್ 2003 ಹಾಗೂ 2004ರ ಮಾರ್ಚ್‌ಕ್ಕೆ ಸಂಬಂಧಪಟ್ಟಂತೆ 158 ಜೀವಗಳಿಗೆ ಭದ್ರತೆ ನೀಡಿ ಮಾಡಿದ ವ್ಯವಹಾರ ಕೋಟಿಯನ್ನು ಮೀರಿದ್ದರಿಂದ, ತಮ್ಮ ಅದ್ಭುತ ಸಾಧನೆಗಾಗಿ ಭಾರತೀಯ ಜೀವ ವಿಮಾ ನಿಗಮದ ವತಿಯಿಂದ 2003-2004ರ ಸಾಲಿನ ಕೋಟ್ಯಾಧಿಪತಿ ಎಂಬ ಗೌರವಕ್ಕೆ ಭಾಜನರಾದರು.

ಇವರು ಕಾಲೇಜಿನಲ್ಲಿ ಓದುತ್ತಿದ್ದಾಗ ಉತ್ತಮ ಕ್ರೀಡಾ ಪಟುವಾಗಿದ್ದರು ಮತ್ತು 1989ರಲ್ಲಿ B.A. ಪದವಿಯನ್ನು ಹಾಗೂ 1990ರಲ್ಲಿ G.D.C. ಡಿಪ್ಲೋಮ ತರಬೇತಿಯನ್ನು ಪಡೆದಿರುತ್ತಾರೆ. ಗೌಡ ಸಮಾಜಕ್ಕೆ ಸೇರಿದ ಮಹಿಳೆಯೊಬ್ಬಳು ಇಂತಹ ಸಾಧನೆ ಮಾಡಿರುವುದು ನಮ್ಮೆಲ್ಲರಿಗೂ ಸಂದ ಗೌರವವಾಗಿರುತ್ತದೆ. ಶ್ರೀಮತಿ ಬೇಬಿಯವರಿಗೆ ಸದಾ ಬೆಂಬಲಕ್ಕಿರುವವರು ಅವರ ಪತಿ ಕೊಂಪುಳೀರ ಕೆ. ಮುತ್ತಪ್ಪನವರು. ತಮ್ಮ ಪತ್ನಿಯ ಸಾಧನೆಯಲ್ಲಿ ಅವರಿಗೆ ಅಪರಿಮಿತ ಅಭಿಮಾನ. ಇವರಿಗೆ ಓರ್ವ ಪುತ್ರ ಹಾಗು ಓರ್ವ ಪುತ್ರಿ ಇದ್ದು, ಇವರದು ಸುಖೀ ದಾಂಪತ್ಯ ಜೀವನ. ಶ್ರೀಮತಿ ಬೇಬಿಯವರ ಮತ್ತೊಂದು ಸಾಧನೆ ಎಂದರೆ ಇವರು ಮಹಿಳೆಯರಿಗೆ ಮತ್ತು ಕಾಲೇಜು ವಿದ್ಯಾರ್ಥಿನಿಯರಿಗೆ ದ್ವಿಚಕ್ರವಾಹನ ತರಬೇತಿಯನ್ನು ಕೂಡಾ ನೀಡುತ್ತಲಿದ್ದಾರೆ. ಆಸಕ್ತಿ ಇರುವ ಮಹಿಳೆಯರು ಹಾಗೂ ವಿದ್ಯಾರ್ಥಿನಿಯರು ಇವರನ್ನು ಸಂಪರ್ಕಿಸಬಹುದು. ಇವರ ದೂರವಾಣಿ ಸಂಖ್ಯೆ : 94480-71585, ಶ್ರೀಮತಿ ಬೇಬಿಯವರು ಇನ್ನೂ ಹೆಚ್ಚಿನ ಸಾಧನೆಯನ್ನು ಮಾಡಲಿ ಹಾಗೂ ಯಶಸ್ಸನ್ನು ಪಡೆಯಲಿ ಎಂದು ಹಾರೈಸೋಣ.

- ಸಂಗಾತಿ



## ಶುಭ ವಿವಾಹ



1.ಸೋಮವಾರಪೇಟೆ ಕುಶಾಲನಗರ ಹೋಬಳಿ ನಂಜರಾಯ ಪಟ್ಟಣ ಗ್ರಾಮದ ಕೋಳ್ಳಿರ ಬಿದ್ದಪ್ಪ ಮತ್ತು ಜಾನಕಿ ದಂಪತಿಗಳ ಪುತ್ರಿ ಗೀತಾ ಮತ್ತು ಕಟ್ಟೆಮಾಡು ಗ್ರಾಮದ ಕಟ್ಟೆಮನೆ ದಿ. ದೊಡ್ಡಯ್ಯನವರ ಪುತ್ರ ಗಿರೀಶ್‌ನವರ ವಿವಾಹವು ದಿನಾಂಕ 2-6-2004 ನೇ ಬುಧವಾರ ಕುಶಾಲನಗರದಲ್ಲಿರುವ ಹೋಟೇಲ್ ಕಾಳೇಘಾಟ್ ಕಲ್ಯಾಣ ಮಂಟಪದಲ್ಲಿ ಬಹು ವಿಜೃಂಭಣೆ ಯಿಂದ ನೆರವೇರಿತು.

2.ಕುಶಾಲನಗರ ನಿವಾಸಿ ಉದಿಯನ ಅಪ್ಪಾಜಿ ಮತ್ತು ಪ್ರೇಮ ದಂಪತಿಗಳ ಪುತ್ರಿ ಸರಿತ ಮತ್ತು ಕುಂದಚೇರಿ ಗ್ರಾಮದ ಕೆದಂಬಾಡಿ ಜಯಂತಿ ಮತ್ತು ದಿ. ಕುಟ್ಟಪ್ಪನವರ ಪುತ್ರ ಪ್ರದೀಪ್ ಇವರ ಲಗ್ನ ಕಾರ್ಯವು ದಿನಾಂಕ 31-5-2004ರ ಸೋಮವಾರ ಮಡಿಕೇರಿಯಲ್ಲಿರುವ ಕೆಳಗಿನ ಗೌಡ ಸಮಾಜ ಕಲ್ಯಾಣ ಮಂಟಪದಲ್ಲಿ ಸಾಂಗವಾಗಿ ನೆರವೇರಿತು.

3.ಸುಂಟಿಕೊಪ್ಪ ನಿವಾಸಿ ಯಂಕನ ಕುಶಾಲಪ್ಪ ಮತ್ತು ಶೈಲಾ ದಂಪತಿಗಳ ಪುತ್ರ ಸಂಘರ್ಶ್ ಮತ್ತು ಬೆಂಗಳೂರು ದುರ್ಗಹಳ್ಳಿ ನಿವಾಸಿ ನಾರಾಯಣ ಗೌಡರ ಮಗಳು ಮಧುಶ್ರೀ ಇವರ ವಿವಾಹವು ದಿನಾಂಕ 4-6-04ರ ಶುಕ್ರವಾರ ಕುಶಾಲನಗರದಲ್ಲಿರುವ ಕನ್ನಿಕಾ ಇಂಟರ್ ನ್ಯಾಶನಲ್ ಕಲ್ಯಾಣ ಮಂಟಪದಲ್ಲಿ ಬಹು ಅದ್ದೂರಿಯಾಗಿ ನೆರವೇರಿತು.

4.ಮಂಡ್ಯ ನಿವಾಸಿ ಪುದಿನೆರವನ ತಮ್ಮಯ್ಯ ಮತ್ತು ಯಮುನಾ ದಂಪತಿಗಳ ಪುತ್ರಿ ಮಾಲಿನಿ ಮತ್ತು ಬಿಳಿಗೇರಿ ಗ್ರಾಮದ ಕಾಳೆಯಂಡ್ರ ಮೊಣ್ಣಪ್ಪನವರ ಪುತ್ರ ಅಶೋಕ ಇವರ ಶುಭ ಲಗ್ನವು ದಿನಾಂಕ 14-6-2004ರ ಭಾನುವಾರ ಮಂಡ್ಯದ ಹೋಟೇಲ್ ಹರಿಪ್ರಿಯದಲ್ಲಿ ಬಹು ಸಂಭ್ರಮದಿಂದ ನಡೆಯಿತು.

## ಪತ್ರಿಕೆಯ ಬಗ್ಗೆ ಎರಡು ಮಾತು

"ಕೊಡಗು ಸಂಗಾತಿ" ಎಂಬ ಪತ್ರಿಕೆ ಗೌಡ ಜನಾಂಗದವರಿಗಾಗಿ ಕಳೆದ ಏಳೆಂಟು ವರ್ಷಗಳಿಂದ ಕೈಯ್ಯಾಲ್ಲಾದ ಪ್ರಯತ್ನದೊಂದಿಗೆ ಶ್ರಮಿಸುತ್ತಿದೆ. ಈ ಪತ್ರಿಕೆಯಲ್ಲಿ ಶ್ರಮ ಪಟ್ಟು ದುಡಿಯಲು ತೊಡಗಿಸಿಕೊಂಡಿರುವಂತ ಎಲ್ಲಾ ಕಾರ್ಯಕರ್ತರಿಗೆ ನನ್ನ ಮೊದಲಿನ ಹಾರ್ದಿಕ ಅಭಿನಂದನೆಗಳು.

ಒಂದು ಒಳ್ಳೆ ಕಾರ್ಯ ಮಾಡಬೇಕಾದಲ್ಲಿ ಹಲವಾರು ತೊಡಕುಗಳು ಹಾಗೂ ಹೊಗಳಿಕೆ ತೆಗಳಿಕೆಗಳು ಇದ್ದದೆ. ಇದನ್ನೆಲ್ಲಾ ಸಾಧ್ಯವಾದಷ್ಟು ಸಮರ್ಥ ರೀತಿಯಲ್ಲಿ ನಿಭಾಯಿಸಿಕೊಂಡು ಬರುತ್ತಿರುವುದು ಹಾಗೂ ಕೇಳಿದಂತ ಹಲವಾರು ಟೀಕೆಗಳಿಗೆ ಮುಚ್ಚು ಮರೆಯಿಲ್ಲದೆ ಸಮರ್ಥ ಉತ್ತರ ಕೊಡುತ್ತಿರುವುದು ತುಂಬಾ ಸಂತೋಷದ ವಿಷಯ. ಅಲ್ಲದೆ ಗಾದೆಗಳಿಂದ ಹಿಡಿದು ಕಥೆಗಳು, ಮೂಲೆ ಮೂಲೆಗಳಲ್ಲಿ ಆಗುತ್ತಿರುವ ತಮ್ಮ ಜನಾಂಗಗಳ ಜನ ಮೆಚ್ಚಿದ ಚಟುವಟಿಕೆಗಳು ಸೂಕ್ಷ್ಮವಾಗಿ ಹೇಳುವುದಾದರೆ ಇನ್ನು ಹತ್ತು ಹಲವು ವಿಚಾರಗಳು ಮುಖ್ಯವಾಗಿ ಯುವ ಪ್ರತಿಭೆಗಳನ್ನು ಎಲ್ಲಾ ಕ್ಷೇತ್ರಗಳಲ್ಲಿ ಗುರುತಿಸಿ ಅವರನ್ನು ನಮ್ಮ ಜನಾಂಗಕ್ಕೆ ಪರಿಚಯಿಸುತ್ತಿರುವ ವಿಷಯವಂತೂ ತುಂಬಾ ಸಂತೋಷ ತಂದಿದೆ.

ಹೀಗೆ ನಮ್ಮ "ಕೊಡಗು ಸಂಗಾತಿ" ಇನ್ನೂ ಎತ್ತರಕ್ಕೆ ಬೆಳೆಯಲು ಎಲ್ಲಾ ಓದುಗರು ಮನಸಾರ ಸಹಕರಿಸಬೇಕೆಂದು ನನ್ನ ಕಳಕಳಿಯ ವಿನಂತಿ. ಹಾಗೂ "ಕೊಡಗು ಸಂಗಾತಿ" ಗೆ ಶುಭವನ್ನು ಹಾರೈಸುವ ಓದುಗರಲ್ಲಿ ಒಬ್ಬನಾದ ವಂದನೆಗಳೊಂದಿಗೆ.

- ತೇನನ ಸೋಮಣ್ಣ, ಮಡಿಕೇರಿ.

ಕೀಳರಿಮೆ : ಕೆಲವು ಸಲ ಆಸಕ್ತಿಯ ಕುರುಹು ; ಬಹು ಸಲ ಆತ್ಮವಿಶ್ವಾಸದ ಕೊರತೆ.

# ದೆಹಲಿಯಲ್ಲಿ 29ನೇ ರಾಷ್ಟ್ರೀಯ ಕನ್ನಡ ಸಮ್ಮೇಳನ

ದಿನಾಂಕ 10, 11 ಏಪ್ರಿಲ್ 2004ರಂದು ದೆಹಲಿ ಕನ್ನಡಿಗ ವಾರಪತ್ರಿಕೆ ಇವರ ಆಶ್ರಯದಲ್ಲಿ ದೆಹಲಿಯ ಕರ್ನಾಟಕ ಭವನ ಸಭಾಂಗಣದಲ್ಲಿ ತುಂಬಾ ಅದ್ದೂರಿಯಾಗಿ ಜರುಗಿತು. ಅಧ್ಯಕ್ಷತೆಯನ್ನು ಎಸ್. ರಾಜೇಂದ್ರಬಾಬುರವರು ವಹಿಸಿದರು. ಪಿ. ಶಂಕರ್ ಉದ್ಘಾಟಿಸಿದರು.

ಎರಡು ದಿನಗಳಲ್ಲಿ ನಡೆದ ಈ ಸಮ್ಮೇಳನದಲ್ಲಿ ಹಲವಾರು ಶ್ರೇಷ್ಠ ಸಾಹಿತಿಗಳು, ಕವಿಗಳು, ಮತ್ತಿತರ ಅನೇಕ ಗಣ್ಯರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಪ್ರಶಸ್ತಿ ವಿತರಣೆ, ಮಹಿಳಾ ಉತ್ಸವ, ಗಣನೀಯ ಸೇವೆ ಸಲ್ಲಿಸಿದವರಿಗೆ ಸನ್ಮಾನ, ಕವಿಗೋಷ್ಠಿ, ವಿಚಾರಗೋಷ್ಠಿ, ಭಾಷಾ ಬಾಂಧವ್ಯ ಕನ್ನಡದ ಸರ್ವಾಂಗೀಣ ಪ್ರಗತಿ, ಬಾಲಗೋಷ್ಠಿ ಇತ್ಯಾದಿ ಅನೇಕ ಗೋಷ್ಠಿಗಳು ನಡೆದವು. ಸಂಜೆ ಸಮಯದಲ್ಲಿ ಕರ್ನಾಟಕ ಸಾಂಸ್ಕೃತಿಕ ವೈಭವ ಕಾರ್ಯಕ್ರಮಗಳು ಅತಿ ಚೆನ್ನಾಗಿ ಮೂಡಿಬಂದವು. ಸುಪ್ರೀಂಕೋರ್ಟ್‌ನ ನ್ಯಾಯಮೂರ್ತಿ ಎಸ್. ರಾಜೇಂದ್ರಬಾಬು ಅಧ್ಯಕ್ಷತೆ ವಹಿಸಿದ್ದರು.

ಸ್ಮರಣ ಸಂಚಿಕೆಯನ್ನು ಪ್ರೊಫೆಸರ್ ಪಿ.ವಿ. ಇಂದಿರೇಷನ್ ಇವರು ಬಿಡುಗಡೆ ಮಾಡಿದರು. ಸಾಹಿತ್ಯೋತ್ಸವ ಉದ್ಘಾಟನೆಯನ್ನು ತಿರುಪತಿ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠದ ಕುಲಾಧಿಪತಿ ಡಾ|| ವಿ.ಆರ್. ಪಂಚಮುಖಿಯವರು ಉದ್ಘಾಟಿಸಿದ್ದಾರೆ. ಕರ್ನಾಟಕ ಪ್ರಗತಿ ಉತ್ಸವಕ್ಕೆ ಚಾಲನೆ ನೀಡಿದವರು ಶ್ರೀ ಸುಧಾಕರ್‌ರಾವ್‌ನವರು.

'ವಿಚಾರ ಗೋಷ್ಠಿ' ನನ್ನ ಬದುಕಿನಲ್ಲಿ ಕಂಡ ಸಂಸ್ಕೃತಿ, ಚಿತ್ರಕಲೆಯಿಂದ ಚಿತ್ತಸ್ವಾಸ್ತ, ಸಾಹಿತ್ಯದಿಂದ ಸುಖ, ಗ್ರಾಹಕರ ಸಂಘಟನೆ, ಶಿಕ್ಷಣ ರಂಗದಲ್ಲಿ ಸುಧಾರಣೆ, ವೈದ್ಯರಂಗದಲ್ಲಿ ರಮ್ಯತೆ, ವಾಸ್ತುಶಿಲ್ಪದಲ್ಲಿ ವಿಸ್ಮಯ, ಬ್ಯಾಂಕಿನ ರಂಗದಲ್ಲಿ ಬದಲಾವಣೆ, ಬದಲಾಗುತ್ತಿರುವ ಕನ್ನಡ ಸಂಸ್ಕೃತಿ, ಕನ್ನಡ ಸೇವೆಯಿಂದ ಸಂತೃಪ್ತಿ. ಕಲಾರಂಗದಲ್ಲಿ ಕೀರ್ತಿ, ಸಂಗೀತದಲ್ಲಿ ಗೌರವ, ಚದುರಂಗದ ಕನ್ನಡ ಸೇವೆಯಲ್ಲಿ ವಿವಿಧ ರೀತಿಯ ಸುಮಾರು 9 ಪ್ರಬಂಧಗಳು ಮಂಡಿಸಲ್ಪಟ್ಟವು.

ವಿಚಾರ ಗೋಷ್ಠಿ ಭಾಷಾ ಬಾಂಧವ್ಯದಲ್ಲಿ ಕನ್ನಡ ಇಂಗ್ಲೀಷ್ ಸಂಬಂಧ, ಕನ್ನಡ ತೆಲುಗು ಸಂಬಂಧ, ಕನ್ನಡ ಕೊಂಕಣಿ ಸಂಬಂಧ, ಕನ್ನಡ ಮಲೆಯಾಳ ಸಂಬಂಧ, ಹವ್ಯಕ ಕನ್ನಡ ಸಂಬಂಧ, ಅರೆಭಾಷೆ ಕನ್ನಡ ಸಂಬಂಧ, ತುಳು ಕನ್ನಡ ಸಂಬಂಧ, ಕನ್ನಡ ಬಂಗಾಳಿ ಸಂಬಂಧ, ಸಂಸ್ಕೃತ ಕನ್ನಡ ಸಂಬಂಧ, ಕನ್ನಡ ಕೊಡಗು ಸಂಬಂಧ, ಕನ್ನಡ ಪೋರ್ಚುಗೀಸ್, ಗ್ರೀಕ್ ಸಂಬಂಧ, ಕನ್ನಡ ತಮಿಳು ಸಂಬಂಧ ಇವುಗಳ ಬಗ್ಗೆ ಪ್ರಬಂಧಗಳು ಮಂಡಿಸಲ್ಪಟ್ಟವು.

ಕನ್ನಡದ ಸರ್ವಾಂಗೀಣ ಪ್ರಗತಿ, ಈ ವಿಷಯವಾಗಿ ಆಡಳಿತದಲ್ಲಿ ಕನ್ನಡ, ಸಮೂಹ ಮಾಧ್ಯಮದಲ್ಲಿ ಕನ್ನಡ, ಶಿಕ್ಷಣದಲ್ಲಿ ಕನ್ನಡ, ಆರ್ಥಿಕ ರಂಗದಲ್ಲಿ ಕನ್ನಡ, ಸಾಹಿತ್ಯದಲ್ಲಿ ಕನ್ನಡ, ಹೊರನಾಡು ಮತ್ತು ಕನ್ನಡ ಸಂಗೀತದಲ್ಲಿ ಕನ್ನಡ, ರಂಗಭೂಮಿಯಲ್ಲಿ ಕನ್ನಡ ಹೀಗೆ ಕನ್ನಡ ಪ್ರಗತಿ ಕುರಿತು ಮಂಡನೆಗಳಾದವು. ಸಮಾಜದಲ್ಲಿ ಗಣನೀಯ ಸೇವೆ ಸಲ್ಲಿಸಿದ ಶ್ರೀಯುತರಿಗೆ ಸಾಹಿತ್ಯದಲ್ಲಿ ಡಾ|| ಜೆ.ಡಿ. ಜೋಶಿ, ಬ್ಯಾಂಕ್ - M. N. ರೆಡ್ಡಿ, ವೈದ್ಯಕೀಯ - ಡಾ|| S.S. ನರಸರಗಿ, ಶಿಕ್ಷಣ - B.S. ಹೆಗಡೆ, ಆಡಳಿತ-B.S. ಕೃಷ್ಣಪ್ರಸಾದ್, ಗ್ರಾಹಕ ಸೇವೆ R-ಪ್ರಭಾಕರ್, ಕನ್ನಡ ಸೇವಾ - P.L. ಅಗ್ನಿಗೋತ್ರಿ, ಪಶು ವೈದ್ಯಕೀಯ - ಡಾ|| M. N. ವೈನ್ನಾರಿ ಹಾಗೂ ಇಂಜಿನೀರಿಂಗ್‌ನಲ್ಲಿ ನಿಡ್ಡಮಲೆ A ಮಾಧವ ಇವರುಗಳು ಸನ್ಮಾನಿಸಲ್ಪಟ್ಟರು.

ಗಣನೀಯ ಸೇವೆ ಸಲ್ಲಿಸಿದ ಮಹಿಳೆಯರಿಗೆ ಸನ್ಮಾನ ನಡೆಯಿತು. ಸಾಹಿತ್ಯದಲ್ಲಿ ಶ್ರೀಮತಿ ವರದ ಚಂದ್ರಶೇಖರ್, ಸಂಗೀತ ನೃತ್ಯದಲ್ಲಿ ಶ್ರೀಮತಿ ಸರಜಾ ಮಧುಸೂಧನ್, ಉದ್ಯಮದಲ್ಲಿ ಭಾರತಿ ವೆಂಕಟ್‌ಶ್, ಕನ್ನಡ ಪ್ರಚಾರದಲ್ಲಿ ಶ್ರೀಮತಿ ರಜಿನಿ ಜೋಳ, ವೈದ್ಯಕೀಯ ರಂಗದಲ್ಲಿ ಶ್ರೀಮತಿ ರತ್ನ ಅಹುಜ, ಸೌಂದರ್ಯ ಶಾಸ್ತ್ರದಲ್ಲಿ ದಾಕ್ಷಾಯಿಣಿ ಮುಗಟಿ, ನೃತ್ಯದಲ್ಲಿ ತಾರಾ ಎಸ್. ರಾವ್, ಚಿತ್ರಕಲೆ ನೀಲಮ್ಮ ಬೆಳವಗಿ, ಹಾಗೂ ಶಿಕ್ಷಣದ ಡಾ. ಶ್ರೀಮತಿ ವೀಣಾರಾವ್‌ರವರು ಸನ್ಮಾನಿಸಲ್ಪಟ್ಟರು. ಎರಡು ದಿನಗಳ ಕಾಲ ನಡೆದ ಇಪ್ಪತ್ತೊಂಭತ್ತನೆ ರಾಷ್ಟ್ರೀಯ ಕನ್ನಡ ಸಮ್ಮೇಳನ ಬಹಳ ಅದ್ದೂರಿಯಿಂದ ನಡೆಯಿತು. ದೆಹಲಿಯಲ್ಲಿ ಕನ್ನಡಿಗರು, ಹೊರನಾಡ ಕನ್ನಡಿಗರು ಕನ್ನಡಿಗರನ್ನು ನಾಡಿನ ಭಾಷೆ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುವಲ್ಲಿ ಈ ಸಮ್ಮೇಳನವು ಐಕ್ಯತೆಮತ್ತು ಕನ್ನಡ ಸಾರ್ವಭೌಮತೆಯನ್ನು ರಾಷ್ಟ್ರದ ರಾಜಧಾನಿ ದೆಹಲಿಯಲ್ಲಿ ನಡೆಸುವಲ್ಲಿ ಸಫಲವಾಯಿತೆಂದು ಹೇಳಿದರೆ ಖಂಡಿತ ಅತಿಶಯಯೋಕ್ತಿ ಯಾಗಲಾರದು.

- ಸಂಗಾತಿ, ಪ್ರಭಾಕರ.

---

## ನೆಗಾಡಿಕೆ

ಸಣಪ್ಪ : ಚಂದು ಬ್ಯಾಗ ಹೋಗಿ ಈ ಕಾಗದನ ಪೋಸ್ಟ್ ಮಾಡಿ ಬಂದಿಯಾ

ಚಂದು : ಆತ್, ಹೋಗಿ ಬನ್ನೆ.

ಸಣಪ್ಪ : ಯಾಕನೆ ಪೋಸ್ಟ್ ಮಾಡದೆ ಹಂಗೆನೇ ವಾಪಾಸು ಬಂದೋಳಾ ?

ಚಂದು : ಮರ್‌ಗೋಡ್ ಪೋಸ್ಟ್ ಡಬ್ಬಿಂದ ಯಾವನೋ ಒಬ್ಬ ಚೀಲಕ್ಕೆ ಎಲ್ಲಾ ಹಾಕಣ್‌ತ್ತಿತ್. ಅಂವ ಕಳ್ಳ ಇರುಕ್ಕುತ್ತೇಳಿ ಹಾಕದೆ ವಾಪಾಸ್ ಬಂದೆ.

ಸಣಪ್ಪ : ನಿನ್ನ ತಲೆ, ಅಂವ ಪೋಸ್ಟ್ ಮ್ಯಾನ್ ಮಾರಾಯ ಅಂವ ಕಳ್ಳ ಅಲ್ಲಾ, ನಿಂಗೆ ಸೊಯ್ಯೆ ಇಲ್ಲೆ ? ಇನ್ನಾದರ್ ಸ್ವಲ್ಪ ತಲೆ ಒಡ್ಸನೆ

- ಕಾನಡ್ಕ ಚರಣ್ ಶಿವಯ್ಯ, ಮರಗೋಡು

---

(9) ಸಮಾನತೆ ಪ್ರತ್ಯೇಕತೆಯಿಂದ ಸಾಧಿತವಾಗುವುದಿಲ್ಲ, ಹೊಗಳಿಕೆಯ ಮೂಲ ಸ್ವಾರ್ಥ.

# ಸಾಧನೆಯ ಹಾದಿಯಲ್ಲಿ ಗೌಡ ಜನಾಂಗ......, ಮಡಿಕೇರಿ ಆಕಾಶವಾಣಿಯಿಂದ ಮೊದಲ ರೇಡಿಯೋ ನಾಟಕ ಪ್ರಸಾರ

ಆಗ 1996 ನೇ ಇಸವಿ ಕೊಡಗಿನಲ್ಲಿ ಕೊಡಗು ಗೌಡ ವಿದ್ಯಾಸಂಘ ಮತ್ತು ಕೊಡಗು ಗೌಡ ಸಮಾಜಗಳು ಅಸ್ತಿತ್ವದಲ್ಲಿದ್ದವು. ಸಮಾರಂಭಗಳು ನಡೆಯುತ್ತಿದ್ದವು ಆದರೆ ಜನ ಸಾಮನ್ಯರ ಸ್ಪಂದನ ನಿರೀಕ್ಷಿತ ಮಟ್ಟದಲ್ಲಿರಲಿಲ್ಲ. ಮೈಸೂರಿನಲ್ಲಿ ವಿದ್ಯಾಸಂಘದ ಶಾಖೆಯಿತ್ತು. ಅಲ್ಲೂ ಸಹ ಸಂಘಟನೆ ಸ್ಥಗಿತದತ್ತ ಸಾಗುತ್ತಿತ್ತು. ಕೊಡಗಿನಲ್ಲಿ ಪ್ರತ್ಯೇಕ ರಾಜ್ಯದ ಹೋರಾಟ ನಡೆಯುತ್ತಿತ್ತು. ಮೊದ ಮೊದಲು ಗೌಡ ಜನಾಂಗದ ಕೆಲವರು ಆ ಹೋರಾಟದಲ್ಲಿ ಗುರುತಿಸಿಕೊಂಡಿದ್ದರು. ಆದರೆ ಆ ಹೋರಾಟ ಕೆಲವರಿಗೆ ಮಾತ್ರ ಸೀಮಿತಗೊಳ್ಳುತ್ತಿದ್ದಂತೆ ಅಲ್ಲಿಂದ ಎಲ್ಲರೂ ಹೊರ ಬರಲಾರಂಭಿಸಿದರು. 1996 ರಲ್ಲಿ ಮೊಟ್ಟ ಮೊದಲ ಬಾರಿಗೆ ಮೈಸೂರಿನಲ್ಲಿ ಒಂದು ಉತ್ಸಾಹಿ ತಂಡ ಗೌಡ ಜನಾಂಗದ ಸಂಘಟನೆಯನ್ನು ಆರಂಭಿಸಿತು. ಮೈಸೂರಿನಲ್ಲಿ ಬೃಹತ್ ಸಂಘಟನೆಯನ್ನು ಮಾಡುವುದರ ಮೂಲಕ ಕೈಲ್ ಮುಹೂರ್ತ ಹಬ್ಬವನ್ನು ಆಚರಿಸಿಕೊಂಡಿತು. ಆ ಸಂಘಟನೆ ಎಷ್ಟರ ಮಟ್ಟಿಗೆ ಪರಿಣಾಮ ಕಾರಿಯಾಯಿತೆಂದರೆ ಜನ ಸಾಮಾನ್ಯರೂ ಸಹ ಸಕ್ರೀಯವಾಗಿ ಜಾಗೃತಗೊಳ್ಳಲು ಪ್ರೇರೇಪಣೆ ನೀಡಿತು

ಮುಂದಿನ ವರ್ಷಗಳಲ್ಲಿ ಕೊಡಗು ಸಂಗಾತಿ ಪತ್ರಿಕೆ, ಕೊಡಗು ಗೌಡ ಮಹಿಳಾ ಒಕ್ಕೂಟ, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಕೊಡಗು ಗೌಡ ಮಾಜಿ ಸೈನಿಕರ ಸಂಘ, ಕೊಡಗು ಗೌಡ ಮಾಜಿ ನೌಕರರ ಸಂಘಗಳು ತಲೆಯೆತ್ತಿದವು. ಭಾಗಮಂಡಲದಲ್ಲಿ ಬೃಹತ್ ಗೌಡ ಸಮ್ಮೇಳನ ಸಹ ನಡೆಯಿತು. ಹಲವು ಕುಗ್ರಾಮಗಳಲ್ಲಿಯೂ ಸಹ ಗೌಡ ಸಮಾಜಗಳು ತಲೆಯೆತ್ತಲಾರಂಭಿಸಿದವು. ಪಿರಿಯಾ ಪಟ್ಟಣ, ಹಾಸನ, ವಿರಾಜಪೇಟೆ, ಪಾರಾಣೆಯಂತಹ ನಾಡಿನಲ್ಲೂ ಗೌಡ ಸಮಾಜಗಳು ಈಗ ತಲೆಯೆತ್ತಿವೆ. ಕೊಡಗು ಗೌಡ ಫೆಡರೇಷನ್ ಸಹ ಈಗ ಅಸ್ತಿತ್ವಕ್ಕೆ ಬಂದಿದೆ. ಈಗ ಕೊಡಗಿನಲ್ಲಿ ಗೌಡ ಎಂದು ಹೇಳಿಕೊಳ್ಳಲು ಹೆಮ್ಮೆಯೆನಿಸುವ ರೀತಿಯಲ್ಲಿ ಗೌಡ ಜನಾಂಗ ಬೆಳವಣಿಗೆಯಾಗಿದೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಗೌಡ ಅಕಾಡೆಮಿ ಗೌಡ ಕುಟುಂಬಗಳ ನಡುವೆ ನಡೆಸುವ ಕ್ರಿಕೆಟ್ ಪಂದ್ಯಾವಳಿ, ಕೆಸರು ಗದ್ದೆ ಓಟ, ಕೈಲ್ ಮುಹೂರ್ತ, ಮಡಿಕೇರಿಯಲ್ಲಿ ಹುತ್ತರಿ ಹಬ್ಬ ಆಚರಣೆ ಜನಾಂಗದಲ್ಲಿ ಸಂಘಟನೆಯ ಸಂಚಲನೆಯನ್ನುಂಟುಮಾಡಿದೆ. ಗೌಡ ಮಹಿಳಾ ಒಕ್ಕೂಟವು ಸಹ ಹಲವು ಸಭೆ ಸಮಾರಂಭಗಳಲ್ಲಿ ತನ್ನದೇ ಕಲಾ ತಂಡಗಳ ಮೂಲಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡುವ ಮೂಲಕ ಗೌಡ ಜನಾಂಗದ ಇರುವಿಕೆಯನ್ನು ಹೊರ ಜಗತ್ತಿಗೆ ತೋರಿಸಿಕೊಟ್ಟಿದೆ. ಗೌಡ ವಿದ್ಯಾಸಂಘವು ವಿದ್ಯಾರ್ಥಿಗಳ ಅನುಕೂಲಕ್ಕೆ ಏನೇನು ಕೊಡಲು ಸಾಧ್ಯವೋ ಅದೆಲ್ಲವನ್ನೂ ಮಾಡುತ್ತಿದೆ. ಮಡಿಕೇರಿ ಆಕಾಶವಾಣಿಯಲ್ಲೂ ಸಹ ಪ್ರತಿ ತಿಂಗಳ ಮೊದಲ ಶುಕ್ರವಾರ ಮಧ್ಯಾಹ್ನ 2-35 ಗಂಟೆಗೆ ಸ್ನೇಹ ಕಾವೇರಿ ಕಾರ್ಯಕ್ರಮದಲ್ಲಿ ಅರೆಗನ್ನಡ ಭಾಷೆಯ ಕಾರ್ಯಕ್ರಮ ನಿರಂತರವಾಗಿ ಹರಿದು ಬರುತ್ತಿದೆ. ಜುಲೈ ತಿಂಗಳ ಮೊದಲ ಶುಕ್ರವಾರ ಬಿ. ಆರ್. ಜೋಯಪ್ಪ ರಚಿಸಿದ ಎಂಬ ಪ್ರಪ್ರಥಮ ರೇಡಿಯೋ ನಾಟಕ ಪ್ರಸಾರವಾಗಿದೆ.

ಸಾಹಿತ್ಯ ಕ್ಷೇತ್ರದಲ್ಲಿ ಹಲವು ಅರೆಭಾಷೆಯ ಕವನ ಸಂಕಲನಗಳು, ಚಾಂಪಾ ಎಂಬ ಅರೆಭಾಷೆಯ ಕಥಾ ಗುಚ್ಛ ಹೊರಬಂದಿದೆ. ಅರೆಭಾಷೆಯ ಕ್ಯಾಸೆಟ್ ಹಾಡುಗಳಂತ ನಾಡಿನ ಸರ್ವಜನರ ಹೃದಯ ಸೂರೆಗೊಳ್ಳುವಲ್ಲಿ ಯಶಸ್ವಿಯಾಗಿದೆ.

ನಮ್ಮ ವಿದ್ಯಾರ್ಥಿಗಳು ಉನ್ನತ ದರ್ಜೆಯಲ್ಲಿ ತೇರ್ಗಡೆಗೊಳ್ಳುತ್ತಾ ನಾಡಿಗೆ ಕೀರ್ತಿ ತರುತ್ತಿದ್ದಾರೆ. ಕೆಲವರು ಈಗ ಸರಕಾರದ ಉನ್ನತ ಹುದ್ದೆಗಳಿಗೆ ಲಗ್ಗೆಯಿಡಲಾರಂಭಿಸಿದ್ದಾರೆ. ರಾಜಕೀಯದಲ್ಲೂ ನಾವೀಗ ದಾಪುಗಾಲಿಟ್ಟಿದ್ದೇವೆ. ಮಡಿಕೇರಿ ನಗರ ಸಭೆ, ಮೂಡಾ, ವಿಧಾನಸಭೆ, ಲೋಕಸಭೆಯಲ್ಲಿ ನಮ್ಮ ಜನಾಂಗದ ಪ್ರತಿನಿಧಿಗಳು ತಲುಪಿದ್ದಾರೆ. ಕೊಡಗಿನಲ್ಲೀಗ ಗೌಡ ಜನಾಂಗ ಚುನಾವಣೆಯಲ್ಲಿ ನಿರ್ಣಾಯಕ ಪಾತ್ರ ವಹಿಸಬಲ್ಲದು ಎಂಬುದು ರಾಜ್ಯ ಹಾಗೂ ರಾಷ್ಟ್ರದ ರಾಜಕೀಯ ನಾಯಕರಿಗೆ ಮನವರಿಕೆಯಾಗಿದೆ. ಗೌಡ ಜನಾಂಗವನ್ನು ಕಡೆಗಣಿಸಿದರೆ ಅದಕ್ಕೆ ಸೂಕ್ತ ಬೆಲೆ ತೆರಬೇಕಾಗುತ್ತವೆಂಬುದನ್ನು ಈಗ ಎಲ್ಲರೂ ಅರಿತಿದ್ದಾರೆ. ಕೆಲವು ಗ್ರಾಮಗಳಲ್ಲಂತೂ ಗೌಡ ಯುವ ಸಂಘಟನೆಗಳು ಅಸ್ತಿತ್ವಕ್ಕೆ ಬಂದಿದ್ದು, ಕ್ರೀಡೆ ಸಮಾಜ ಸೇವೆಗಳಿಗೆ ಯುವಕರನ್ನು ಪ್ರೇರೇಪಿಸುತ್ತಿವೆ. ಕ್ರೀಡೆಗಳಲ್ಲೂ ನಮ್ಮ ಯುವ ಪ್ರತಿಭೆಗಳೀಗ ಮಿನುಗುತ್ತಿವೆ. ಒಟ್ಟಿನಲ್ಲಿ ಕೇವಲ ಆರೇಳು ವರ್ಷಗಳಲ್ಲಿ ಕೊಡಗಿನಲ್ಲಿ ಗೌಡ ಜನಾಂಗದಲ್ಲಿ ಬೃಹತ್ ಕ್ರಾಂತಿಯ ಅಲೆ ಎದ್ದಿದೆ. ಅಭಿವೃದ್ಧಿಯ ಹಾದಿಯತ್ತ ಗೌಡ ಜನಾಂಗವೀಗ ದಾಪುಗಾಲಿಡಲು ಸಜ್ಜುಗೊಳ್ಳುತ್ತಿದೆ.

ಆದರೂ ಗೌಡ ಜನಾಂಗದಲ್ಲಿ ಕೀಳು ದರ್ಜೆಯ ಹೊಟ್ಟೆಕಿಚ್ಚು ಭಾವನೆ ಪೂರ್ತಿಯಾಗಿ ಕಡಿಮೆಯಾಗಿಲ್ಲ. ಕೆಲವು ಕುಗ್ರಾಮಗಳ ಜನತೆ ಇನ್ನೂ ಸಹ ಸಂಘಟನೆಯಿಂದ ಹೊರಗುಳಿದಿದ್ದಾರೆ. ಏನೂ ಮಾಡ, ಮಾಡುವವರನ್ನು ಬಿಡ ಎನ್ನುವ ಹಾಗೆ, ಯಾವುದೇ ಉತ್ತಮ ಕಾರ್ಯಕ್ರಮಗಳನ್ನು ಹಮ್ಮಿಕೊಂಡರೂ ಅದಕ್ಕೆ ಸೂನೆ ಹೇಳಿಕೊಂಡು ಕಾಲೆಳೆಯುವ ಜನ ಇನ್ನೂ ಗೌಡ ಜನಾಂಗದಲ್ಲಿ ಬಹಳಷ್ಟಿದ್ದಾರೆ. ಜನಾಂಗದ ಮುಖ್ಯವಾಹಿನಿಗೆ ಇವರನ್ನು ತರಬೇಕಾದ ಮಹತ್ವದ ಜನಾಬ್ದಾರಿ ಇಂದು ಗೌಡ ನೇತಾರರ ಮೇಲಿದೆ. ಆರ್ಥಿಕವಾಗಿ ಬಹಳಷ್ಟು ಬಲಾಢ್ಯ ಸಂಘಟನೆಯಾಗಿರುವ ಗೌಡ ಸಮಾಜಗಳು ಕೇವಲ ಕಲ್ಯಾಣಮಂಟಪಗಳಾಗಿ ಕಾರ್ಯ ನಿರ್ವಹಿಸಿದರೆ ಜನಾಂಗದ ಏಳಿಗೆ ಮಾಡಲು ಖಂಡಿತ ಸಾಧ್ಯವಿಲ್ಲ. ಜನಾಂಗದ ಏಳಿಗೆಗಾಗಿ ಸಂಘಟನೆಯಾಗಿ ಅವಿರತವಾಗಿ ಶ್ರಮಿಸುತ್ತಿರುವವರನ್ನು ಗುರುತಿಸಿ ಬೆನ್ನು ತಟ್ಟುವ ಕೆಲಸವನ್ನು ಗೌಡ ಸಮಾಜಗಳು ಮಾಡಲೇ ಬೇಕು. ಈಗ ತಾನೆ ಹುಟ್ಟಿಕೊಂಡಿರುವ ಗೌಡ ಫೆಡರೇಷನ್ ಬಗ್ಗೆ ಹಲವು ಅಪಸ್ವರಗಳು ಕೇಳಿಬಂದಿವೆ. ಮುಖ್ಯವಾಗಿ ಅಕಾಡೆಮಿ ಮತ್ತು ವಿದ್ಯಾಸಂಘಗಳು ಫೇಡರೇಷನ್‌ನಿಂದ ದೂರ ಉಳಿದಿವೆ. ಅವುಗಳನ್ನು ಜೊತೆ ಸೇರಿಸಿಕೊಂಡು ಎಲ್ಲಾ ಸಂಘಟನೆಗಳನ್ನೊಡಗೂಡಿ ಗೌಡ ಫೆಡರೇಷನ್ ಕಾರ್ಯ ನಿರ್ವಹಿಸಬೇಕಿದೆ.

ಮುಖ್ಯವಾಗಿ ನಮ್ಮಲ್ಲಿ ಕೇವಲ ಪ್ರತಿಷ್ಠೆಗೋಸ್ಕರ ಹೆಸರಿಗೋಸ್ಕರ ಕೆಲವರು ಸಂಘಟನೆಗಳ ನೇತಾರರೆನಿಸಿಕೊಂಡಿದ್ದಾರೆ. ಅಂತಹವರು ತಕ್ಷಣ ತಮ್ಮ ನಿಲುವನ್ನು ಬದಲಿಸಿಕೊಂಡು ಜನ ಸಮಾನ್ಯರೊಂದಿಗೆ ಬೆರೆತು ಪಾದರಸದಂತೆ ಹೋರಾಡಿ ಜನಾಂಗದ ಕೀರ್ತಿಯನ್ನು ಹೆಚ್ಚಿಸಬೇಕು. ಗೌಡ ಜನಾಂಗ ಸಾಕಷ್ಟು ಸಾಧಿಸಿದೆ. ಸಾಧಿಸಬೇಕಾದ್ದು ಬಹಳಷ್ಟಿದೆ. ಈಗ ಸಾಧನೆಯ ಹಾದಿಯಲ್ಲಿದೆ ಒಗ್ಗಟ್ಟಿನಿಂದ ಆ ಹಾದಿಯನ್ನು ಕ್ರಮಿಸೋಣ,

- ಪಟ್ಟಡ ಶಿವಕುಮಾರ್, ಉಪನ್ಯಾಸಕ.



# "ಮಹಾ ಮಂತ್ರ"

ಧಾರವಾಹಿ : 3

[ಇಲ್ಲಿಯವರೆಗೆ...........

*ಗುರು ಮಾಂತ್ರಿಕ ತ್ರಿಪುರ ಮಂತ್ರ ಶಕ್ತಿಯಿಂದ ರಾಕ್ಷಸನ್ನಾಗಿ ಅಮಾಯಕ ಹೆಣ್ಣುಗಳನ್ನು ದಾಸಿಯರನ್ನಾಗಿ ಮಾಡಿಕೊಂಡಿರುತ್ತಾನೆ. ಈ ತ್ರಿಪುರನ ಅಜ್ಜಿ ಮಾಲಗಮ್ಮ ಮೊಮ್ಮಗನಿಗೆ ಉಪದೇಶವನ್ನು ಮಾಡುತ್ತಾಳೆ. ಅವಳಿಗೊಂದು ಪರಮ ರಹಸ್ಯ ತಿಳಿದಿರುತ್ತದೆ. ಯೋಗ್ಯರಿಗೆ ತಿಳಿಸಬೇಕು ಎಂದು ಕಾಯುತ್ತಿರುತ್ತಾರೆ. ಈ ಚಂಡಾಕ್ಷ, ದಿಂಡಯ್ಯ, ಚಕ್ರನಿಗೆ ಗುರು ಮಾಂತ್ರಿಕ ಉಪದೇಶ ಮಾಡಿ ಕೊನೆಯ ಗುರು ಪೂಜಾ ಕಾರ್ಯಕ್ರಮದ ಬಗ್ಗೆ ತಿಳಿಸಿ ಸಿದ್ಧತೆ ಮಾಡಿಕೊಳ್ಳಲು ಹೇಳುತ್ತಾನೆ.*

ಮುಂದೆ ಓದಿ]

ಮೂವರು ಶಿಷ್ಯರು ಬೇರೆ-ಬೇರೆ ರೂಮುಗಳಲ್ಲಿ ಮಲಗಿಕೊಂಡು ಆಲೋಚನೆ ಮಾಡುತ್ತಿದ್ದಾರೆ.ರೂಮಿನಲ್ಲಿ ಕತ್ತಲಾವರಿಸಿದೆ. ಅದು ಮಾಂತ್ರಿಕ ತ್ರಿಪುರನ ಮನೆ. ರಕ್ತ ತರ್ಪಣ ನೀಡಿ ಸ್ಮಶಾನದ ಕೆಲಸವನ್ನು ಮುಗಿಸಿ ಅವರು ರಾತ್ರಿ ಮಲಗಿ ನಿದ್ರಿಸುತ್ತಿದ್ದಾರೆ. ಅವರಿಗೆ ಈಗ ಮತ್ತೊಂದು ಆಲೋಚನೆ ಬಂದಿದೆ. ಅದರ ಬಗ್ಗೆ ಈಗ ಗಾಢವಾಗಿ ಚಿಂತಿಸುತ್ತಿದ್ದಾರೆ.

ಮಾಂತ್ರಿಕ ದಿಂಡಯ್ಯ !

ಅವನಿಗೆ ಕೇವಲ ಇಪ್ಪತ್ತೈದು ವರ್ಷ. ಅವನಿಗೆ ಅಪ್ಪ, ಅಮ್ಮ ಬಂಧುಗಳು ಇರಲಿಲ್ಲ. ಅವನಿಗೆ ಮೊದಲಿನಿಂದಲೂ ಮಹಾ ಆಸೆ ಇತ್ತು. ಎಲ್ಲಾ ಗುರು ಮಾಂತ್ರಿಕ ತ್ರಿಪುರನ ರೀತಿ !

ಶ್ರೀಮಂತಿಕೆ ಬೇಕು ! ಪ್ರಪಂಚದಲ್ಲಿರುವ ಎಲ್ಲಾ ಚೆಲುವೆಯರನ್ನು ಅನುಭವಿಸಬೇಕು. ಇವನು ಬಯಸುವ ಚೆಲುವೆಯರು ಅವರಾಗಿಯೇ ಬಂದು ಸುಖ ಕೊಡಬೇಕು.

ಇದು ಅವನ ಆಸೆ ! ಮತ್ತೊಬ್ಬ ಮಾಂತ್ರಿಕ ಚಂಡಾಕ್ಷ !

ಅವನಿಗೆ ಮದುವೆ ವಯಸ್ಸಿಗೆ ಬಂದಿರುವ ಮಗಳಿದ್ದಾಳೆ. ಅವನಿಗೆ ಹೆಣ್ಣುಗಳನ್ನು ಅನುಭವಿಸಬೇಕು ಎಂಬ ಚಪಲ ಇಲ್ಲ. ಆದರೆ ಶ್ರೀಮಂತಿಕೆಯ ಆಸೆ ಇದೆ. ಅವನಿಗೆ ತುಂಬಾ..... ತುಂಬಾ ಸಂಪಾದನೆ ಮಾಡಿ ತನ್ನ ಮಗಳನ್ನು ಮಹಾರಾಣಿಯ ರೀತಿ ಮೆರೆಸಬೇಕು ಎಂಬ ಮಹಾ ಆಸೆ ಇದೆ.

ಚಂಡಾಕ್ಷನಿಗೆ ಮಗಳೇ ಸರ್ವಸ್ವ !ಅವಳೇ ಅವನ ಉಸಿರು ! ಅವಳಿಗಾಗಿ ಅವನ ಜೀವನ ! ಹೇಗಾದರೂ ಸರಿ ಕೆಲವು ಕೋಟಿ ರೂಪಾಯಿ ಸಂಪಾದನೆ ಮಾಡಿ ಮಗಳಿಗೆ, ಅಳಿಯನಿಗೆ ಕೊಡಬೇಕು.

ಮತ್ತೊಬ್ಬ ಮಾಂತ್ರಿಕ ಚಕ್ರ ! ಇಪ್ಪತ್ತಮೂರರ ಪ್ರಾಯದವನು. ಅವನು ಉಳಿದಿಬ್ಬರಂತೆ ಅಲ್ಲ. ಅಪಸ್ವರ ರೀತಿಯಲ್ಲಿ ಈ ಕ್ಷುದ್ರ ವಿದ್ಯೆಯನ್ನು ಸಾಧನೆ ಮಾಡಿದ್ದರೂ ಸಹ ಅವನಲ್ಲಿ ಬೇರೆ ಆಲೋಚನೆಗಳು ಇರಲಿಲ್ಲ.

ಶ್ರೀಮಂತಿಕೆ..... ಹೆಣ್ಣಿನ ಚಪಲ. ಎರಡೂ ಅವನಿಗೆ

*ಕೊಡಗು ಸಂಗಾತಿ ಪತ್ರಿಕೆ ಹಿತ ಬಯಸಿ ಪೇರಿಯನ ಸೋಮಯ್ಯ ರತ್ನಾಕರ ಇವರು ಸಂಗಾತಿ ಪತ್ರಿಕೆಯಲ್ಲಿ ಹೆಸರಾಂತ ಕಾದಂಬರಿ ಕಾರ ಕೌಂಡಿನ್ಯನವರ "ಮಹಾಮಂತ್ರ" ಕ್ಕೆ ಪುಟ್ಟ ಪ್ರಾಯೋಜಕರಾಗಿ ಸಹ 'ಕರಿಸಿದ್ದಾರೆ. ಇವರು ಮರಗೋಡು ಗ್ರಾಮದ ಕೃಷಿಕ ಪೇರಿಯನ ಸೋಮಯ್ಯನವರ ಮಗನಾಗಿದ್ದು, ಈಗ ಸಿಪ್ಪಿಂಗ್ ಕಾರ್ಪೊರೇಷನ್ ಆಫ್ ಅಮೇರಿಕ ಇಲ್ಲಿದ್ದಾರೆ.*

*- ಸಂಪಾದಕ*

ಇಲ್ಲ. ಈ ಮಾಂತ್ರಿಕ ವಿದ್ಯೆಯಿಂದ ಜನಗಳಿಗೆ ಉಪಕಾರವನ್ನು ಮಾಡಲು ಸಾಧ್ಯವೇ ಎಂದು ಚಿಂತಿಸುತ್ತಿದ್ದಾನೆ.

ಮೂವರೂ ಒಂದೇ ಊರಿನವರು. ಆದರೆ ಒಂದೇ ಗುಣದವರಲ್ಲ !

ದಿಂಡಯ್ಯನಿಗೆ ತನ್ನ ಗುರು ಮಾಂತ್ರಿಕನೇ ಆದರ್ಶ. ಅವನ ಆಸೆ ಅದೇ... ಅದೇ ಅವನ ಆಸೆ. ನಿಜ.... ಗುರುಬಾಬಾ ಮೂವರು ಚೆಲುವೆಯರನ್ನು ಮದುವೆ ಮಾಡಿಕೊಂಡಿದ್ದಾರೆ. ನಾನು ಹತ್ತು ಮಂದಿಯನ್ನು ಆಗಬೇಕು. ಶ್ರೀಮಂತಿಕೆ ಬೇಕು

XXXXX

ಮರುದಿನ ಬೆಳಿಗ್ಗೆ !

ಮೂವರು ಎದ್ದು ಹೊರಗೆ ಬಂದಾಗ ಅವನಿಗೆ ಎದುರಾದವಳು ಗೂನು ಬೆನ್ನಿನ ಮಾಲಗಮ್ಮ ! ತಲೆ ಎತ್ತಿ ಅವರತ್ತ ನೋಡಿದಳು. ಚಂಡಾಕ್ಷ "ಅಜ್ಜಿ ಬೆಳಗಿನ ತೀರ್ಥ ಆಯಿತೆ ?" ಮಾಲಗಮ್ಮ "ಬೇಗ ಸ್ನಾನ ಮುಗಿಸಿ ಬನ್ನಿ, ಕಷಾಯ ಮತ್ತು ತಿಂಡಿ ಸಿದ್ಧವಾಗಿದೆ".

ದಿಂಡಯ್ಯ "ಅಜ್ಜಿ........... ಈ ಊರಲ್ಲಿ ನಾವು ಇವತ್ತು ಮಾತ್ರ ಇರುತ್ತೇವೆ. ನಮ್ಮ ವಿದ್ಯೆ ಇವತ್ತಿಗೆ ಮುಗಿಯುತ್ತದೆ. ನಾವು ಊರಿಗೆ ಹೋಗುತ್ತೇವೆ. ಕೋಳಿ ಸಾರು ಮತ್ತು ಮುದ್ದೆ ಮಾಡಿಸಿ". ಮಾಲಗಮ್ಮ "ಕೋಳಿ ಊಟದ ವಿಚಾರ ಇರಲಿ. ಈಗ ಮುಂದೆ ಏನು ಮಾಡುತ್ತೀರ ಹೇಳಿ" ದಿಂಡಯ್ಯ "ಅಂದ್ರೆ ಏನಜ್ಜಿ ?" "ಜೀವನಕ್ಕೆ ಏನು ಮಾಡ್ತೀರ ?" ದಿಂಡಯ್ಯ "ಬಂಗಾರದಂತಹ ವಿದ್ಯೆ ಕಲಿತಿರುವಾಗ ನಾವು ಜೀವನ ಮಾಡಲು ಹೆದರಬೇಕೆ ?" ಮಾಲಗಮ್ಮ ಹುಬ್ಬೇರಿಸಿ " ಅಂದರೆ ನೀವು ಈ ವಿದ್ಯೆಯಿಂದ ಸಂಪಾದನೆ ಮಾಡುತ್ತೀರ ?"

"ಅದರಲ್ಲಿ ತಪ್ಪೇನಿದೆ" ಚಂಡಾಕ್ಷ "ಎಲ್ಲರೂ ವಿದ್ಯೆ ಕಲಿಯುವುದು ಯಾಕೆ ? ಚೆನ್ನಾಗಿ ಸಂಪಾದನೆ ಮಾಡಲು ತಾನೆ ?" ದಿಂಡಯ್ಯ "ನಿಮ್ಮ ಮೊಮ್ಮಗ ತ್ರಿಪುರ ಈ ಶ್ರೀಮಂತಿಕೆ ಗಳಿಸಿರೋದು. ಈ ಮಾಂತ್ರಿಕ ವಿದ್ಯೆಯಿಂದ ತಾನೆ ?"

"ಗುರುವಿನಂತೆ ನೀವಾಗುತ್ತೀರ ?" "ಅದರಲ್ಲಿ ತಪ್ಪೇನಿದೆ". ಮಾಲಗಮ್ಮ "ಅವನಿಂದ ವಿದ್ಯೆ ಕಲಿತ ಮೇಲೆ ನಿಮಗೆ ಆ ತ್ರಿಪುರ ತಾನೇ ಆದರ್ಶ". "ಹೌದು ಅಜ್ಜಿ" "ಆದರೆ ಅವನು ಆದರ್ಶ

ಆಗಬಾರದು". ದಿಂಡಯ್ಯ "ಅಜ್ಜೀ........" "ಅವನ ರೀತಿ ನಿಮಗೆ ಬೇಡ" ಚಂಡಾಕ್ಷ "ಅಜ್ಜಿ ನೀವು....." ಮಾಲಗಮ್ಮ "ನಾನೇ ಹೇಳುತ್ತಿದ್ದೇನೆ. ನೀವು ಈ ವಿದ್ಯೆಯನ್ನು ತ್ರಿಪುರನ ರೀತಿ ಸ್ವಾರ್ಥ ಮತ್ತು ದುರಾಸೆಗಾಗಿ ಬಳಸಿಕೊಳ್ಳಬೇಡಿ". ಹಿತ್ತಲಿನಲ್ಲಿ ಬೆಳೆದಿದ್ದ ಹುಣಸೆಮರದ ಅಡಿ ನಿಂತಿದ್ದ ತ್ರಿಪುರ ಕೂಗಿಕೊಂಡನು. ಅಂದ ಮೇಲೆ ಅಜ್ಜಿಯ ಮಾತುಗಳನ್ನು ಕೇಳುತ್ತಾ ನಿಲ್ಲಲು ಸಾಧ್ಯವೆ ? ಈಗ ಅವರುಗಳು ಅಲ್ಲಿಂದ ಓಡಿದರು. ಅಲ್ಲಿ ಚಕ್ರ ಮಾತ್ರ ಇದ್ದಾನೆ. ಮಾಲಗಮ್ಮ "ನೀನ್ಯಾಕಪ್ಪ ನಿಂತಿದ್ದೀಯ ?" "ನಿಮಗೊಂದು ವಿಷಯ ತಿಳಿಸಲು" "ಏನಪ್ಪ ಅದು".

ಚಕ್ರ "ನಾನು ಒಬ್ಬ ಕೆಟ್ಟ, ದುಷ್ಟ ಮಾಂತ್ರಿಕನಿಂದ ಈ ವಿದ್ಯೆ ಕಲಿತ್ತಿದ್ದರೂ ಅವರಂತೆ ಆಗಲಾರೆ". ಮಾಲಗಮ್ಮ ಆಶ್ಚರ್ಯದಿಂದ "ಏನಂದೆ ?" ಚಕ್ರ "ಪರಮ ಪವಿತ್ರವಾದ ವಾಮಾಚಾರವನ್ನು ನನ್ನ ಸ್ವಂತ ಲಾಭ ಅಥವ ವೈಯಕ್ತಿಕ ಸೇಡು ತೀರಿಸಿಕೊಳ್ಳಲು ಉಪಯೋಗಿಸುವುದಿಲ್ಲ". ಸಂತೋಷ.......... ಅಪನಂಬಿಕೆ ಮತ್ತು ಅತ್ಯಾಶ್ಚರ್ಯದಿಂದ ಅವನ ಕಡೆ ನೋಡುತ್ತಿದ್ದಾರೆ ಮಾಲಗಮ್ಮ. ಸ್ವಾರ್ಥಿಗಳ ನಡುವೆ ಒಬ್ಬ ನಿಸ್ವಾರ್ಥಿ ! ದುಷ್ಟರ ನಡುವೆ ಸಾತ್ವಿಕ ! ಹೊರಗಿನಿಂದ "ಏ ಚಕ್ರ" ಎಂಬ ಗಡಸು ಧ್ವನಿ ಕೇಳಿದ ಕೂಡಲೇ ಅಲ್ಲಿಂದ ಓಡಿದನು. ಮಾಲಗಮ್ಮ ಮುಖದಲ್ಲಿ ಮೂಡಿರುವ ಬೆವರಿನ ಬಿಂದುಗಳು ಮೆಲ್ಲಗೆ ಜಾರಿತು. ನರಗಳು ಉಬ್ಬಿಕೊಂಡಿವೆ. ಏನೋ ಸಂತೋಷ...... ನೆಮ್ಮದಿ ! ತುಂಬಾ ವರ್ಷಗಳಿಂದ ಸ್ವಾರ್ಥ ಇಲ್ಲದಿರುವ ಒಬ್ಬ ಮಾಂತ್ರಿಕ ಸಿಗುತ್ತಾನೋ ಏನೋ ಎಂದು ಕಾಯುತ್ತಿದ್ದಳು ಮಾಲಗಮ್ಮ !

ಚಕ್ರನನ್ನು ನಂಬಬಹುದೆ ?

ನನಗೆ ತಿಳಿದಿರುವ ರಹಸ್ಯವನ್ನು ತಿಳಿಯಲು ಈ ಚಕ್ರ ಯೋಗ್ಯನೆ ? ಚೆನ್ನಾಗಿ ಪರೀಕ್ಷೆ ಮಾಡಬೇಕು !

XXXXX

ನವಿಲೂರಿನ ಸ್ಮಶಾನದ ದಕ್ಷಿಣದ ಭಾಗದಲ್ಲಿ ಮಹಾಕೈಕರಣ ಪ್ರಾರಂಭವಾಗಿದೆ. ನಡುಗೆಡ್ಡೆಯ ಮೇಲೆ ಅಗ್ನಿಕುಂಡ ದಗದಗನೆ ಉರಿಯುತ್ತಿದೆ. ಸುತ್ತಲು ಎಂಟು ತ್ರಿಶೂಲಗಳನ್ನು ನೆಲದಲ್ಲಿ ಹೂಳಲಾಗಿದೆ. ಅದರ ತುದಿಗೆ ನಿಂಬೆಹಣ್ಣುಗಳನ್ನು ಚುಚ್ಚಲಾಗಿದೆ. ಸಮಾಧಿಯೊಂದರ ಮೇಲೆ ಗುರು ಮಾಂತ್ರಿಕ ತ್ರಿಪುರ ಪದ್ಮಾಸನ ಸ್ಥಿತಿಯಲ್ಲಿ ಕುಳಿತುಕೊಂಡಿದ್ದಾನೆ. ಅವನು ಬೆತ್ತಲಾಗಿದ್ದಾನೆ. ಅವನ ಎದುರಿಗೆ ಮೂವರು ಶಿಷ್ಯರು ಶವಗಳ ಮೇಲೆ ಕುಳಿತು ಮಂತ್ರ ಹೇಳುತ್ತಿದ್ದಾರೆ. ಒಂದು ಕಡೆ ಕೋಳಿಗಳು, ಎರಡು ಕುರಿಗಳಿವೆ. ಮತ್ತೊಂದು ಕಡೆ ಹೆಂಡ, ರಕ್ತದ ಮಡಕೆಗಳಿವೆ. ಸೀಸೆಗಳಲ್ಲಿ ಹಂದಿ, ಕಾಗೆಯ ಮಲ, ಸಿಂಹದ ಮೂತ್ರ, ಕಪ್ಪು ಅಕ್ಕಿ ಇದೆ. ಮೂವರು ಶಿಷ್ಯರು ಈಗ ಭೂತ, ಪ್ರೇತಗಳಿಗೆ ಶಾಕಿನಿ ಮತ್ತು ಡಾಕಿನಿಯರಿಗೆ ರಕ್ತ ತರ್ಪಣ ನೀಡಿದರು. ಸ್ಮಶಾನದಲ್ಲಿ ದಾಂಧಲೆ ಉಂಟಾಗುತ್ತಿದೆ. ಗಾಳಿ, ಬಿರುಗಾಳಿಯಾಗಿ ಬದಲಾಗಿದೆ. 'ಬರೊ' ಎಂಬ ಶಬ್ದ ! ಮರಗಳು ಬುಡ ಸಮೇತ ಉರುಳಿ ಬೀಳುತ್ತಿವೆ. ಮರದ ಕೊಂಬೆಗಳು ಲಟಲಟನೆ ಮುರಿದು ಬೀಳುತ್ತಿವೆ.

ಸಮಾಧಿಗಳಲ್ಲಿ ಕಂಪನ ! ಮೆಲ್ಲ, ಮೆಲ್ಲಗೆ ಬಾಯಿ ತೆರೆಯಿತು. ಅಸ್ಥಿಪಂಜರದ ಕೈಗಳು ಹೊರಗೆ ಬಂದವು. ವಿಲಕ್ಷಣ ಕಂಪನ..... ಅರಚಾಟ. ಈಗ ಗುರು ಮಾಂತ್ರಿಕನ ಮಹಾನ್ ಶಕ್ತಿಯ ಮಂತ್ರದ ಕೊನೆಯ ಚರಣವನ್ನು ಹೇಳಿ ಮುಗಿಸಿದನು. ಆಗಸದಲ್ಲಿ ಮಿಂಚು ಮೂಡಿತು. ದುತ್ತನೆ ಕಂಡಿತು ಜ್ವಾಲೆ ! ಗಂಟೆಯ ಆಕಾರದಲ್ಲಿರುವ ಜ್ವಾಲೆ ಈಗ ತೇಲುತ್ತಿರುವ ರೀತಿ ಇತ್ತ ಕಡೆ ಬರುತ್ತಿದೆ. ಎಲ್ಲಾ ಮಾಂತ್ರಿಕರು ಎದ್ದು ನಿಂತು ಮಹಾಜ್ವಾಲೆಗೆ ಮಾಂತ್ರಿಕ ಪದ್ಧತಿಯಂತೆ ನಮಸ್ಕರಿಸಿ ರಕ್ತ ಬಲಿ ನೀಡಿದರು. ಕೋಳಿ, ಕುರಿಗಳ ಕತ್ತನ್ನು ಕತ್ತರಿಸಿ ಈ ಶಕ್ತಿಗೆ ನೀವಳಿಸುತ್ತಿದ್ದಾರೆ. ರಕ್ತದ ಹನಿಗಳು ನೆಲಕ್ಕೆ ಬೀಳುವ ಮೊದಲೇ ಅದೃಶ್ಯವಾಗುತ್ತಿದೆ. ರಕ್ತ ತರ್ಪಣ ಮುಗಿದ ಕೂಡಲೇ ಜ್ವಾಲೆ ಅದೃಶ್ಯವಾಯಿತು. ಅದುವರೆಗೂ ಉಂಟಾಗಿದ್ದ ಆ ಕಲರವ, ದಾಂಧಲೆ ಈಗ ಕಡಿಮೆಯಾಯಿತು. ಈಗ ಮಾಂತ್ರಿಕ ತ್ರಿಪುರ "ಇವತ್ತಿಗೆ ನಿಮ್ಮ ಸಾಧನೆಯ ಒಂದು ಹಂತ ಮುಗಿದಿದೆ". ಅವರುಗಳು ನಮಸ್ಕಾರ ಮಾಡಿದರು. ತ್ರಿಪುರ "ಚಂಡ......... ನೀನು ಈ ಮಾಂತ್ರಿಕ ವಿದ್ಯೆಯಿಂದ ಏನು ಮಾಡಬೇಕು ಅಂತ ಇದ್ದೀಯ ?" ಚಂಡಾಕ್ಷ "ಗುರುಬಾಬು........ ನನಗೆ ಈಗ ನಲವತ್ತೆರಡು ವರ್ಷ. ನನ್ನ ಜೀವನ ಬಡತನದಲ್ಲಿ ಕಳೆದಿದೆ. ಇನ್ನು ಮುಂದೆ ಆದರೂ ನಾನು ತುಂಬಾ ಸಂಪಾದನೆ ಮಾಡಿ ಶ್ರೀಮಂತನಾಗಬೇಕು ಎಂಬ ಆಸೆ ಇದೆ".

"ಬೇರೆ ಏನು ಆಸೆ ಇಲ್ಲವೆ ?" "ಇಲ್ಲ ಗುರು ಬಾಬಾ" "ಹಾಗಾದರೆ ನೀನು ತ್ರಿಮಯ ಕ್ಷುದ್ರ ಶಕ್ತಿ ಮಹಾನ್ ರಕ್ತ ಪಿಪಾಸು ರಕ್ತ ಕಾಟೇರಿಯನ್ನು ಆರಾಧಿಸು".

"ಅದರ ಕ್ರಮ ನನಗೆ ತಿಳಿದಿಲ್ಲ". ತ್ರಿಪುರ ಈಗ ಬ್ಯಾಗಿನಿಂದ ಜೀರ್ಣಾವಸ್ಥೆಯಲ್ಲಿರುವ ಕಾಗದಗಳ ಸಂಗ್ರಹದ ಕವರ್ ಅನ್ನು ಕೊಡುತ್ತಾ "ಈ ಪುಸ್ತಕದಲ್ಲಿ ರಕ್ತ ಕಾಟೇರಿಯ ಆರಾಧನೆ ಇದೆ. ನೀನು ಸಾಧನೆ ಮಾಡಿಕೊಂಡರೆ ಬೇಗ ಶ್ರೀಮಂತನಾಗಬಹುದು" ಎಂದು ಕೊಟ್ಟನು. ಅದನ್ನು ಭಯ ಮತ್ತು ಭಕ್ತಿಯಿಂದ ಸ್ವೀಕರಿಸಿ ನಮಸ್ಕಾರ ಮಾಡಿದನು ಚಂಡಾಕ್ಷ.

"ದಿಂಡಯ್ಯ ನಿನ್ನ ಆಸೆ ಏನು ?" ದಿಂಡಯ್ಯ ನಾಚಿಕೆಯಿಂದಲೇ ತನ್ನ ಮನದ ಇಂಗಿತವನ್ನು ಗುರು ಬಾಬಾನಿಗೆ ತಿಳಿಸಿದನು. ತ್ರಿಪುರ ನಗುತ್ತಾ "ಈ ರೀತಿ ಆಸೆ ಬಂದಿರುವುದು ಸಹಜ. ಆದರೆ ಇದು ಸುಲಭ ಅಲ್ಲ". "ಮಾರ್ಗ ತಿಳಿಸಿ ಗುರುಬಾಬಾ" "ರತಿಬಂಧ ಆರಾಧನೆ ಮಾಡಬೇಕು"

"ಯಾವ ರೀತಿ ?" ತ್ರಿಪುರ ಈಗ ಸುಮಾರು ಅರ್ಧ ಗಂಟೆಯ ಕಾಲ ರತಿಬಂಧ ಆರಾಧನೆಯ ಬಗ್ಗೆ ತಿಳಿಸಿದನು. ಸಮಸ್ತ ವಿವರಗಳನ್ನು ಅನುಮಾನಕ್ಕೆ ಅವಕಾಶ ಆಗದ ರೀತಿಯಲ್ಲಿ ಕೇಳಿ ತಿಳಿದುಕೊಂಡನು. ದಿಂಡಯ್ಯ ಅಂದುಕೊಂಡನು, ಊರಿಗೆ ಹೋದ ಕೂಡಲೇ ರತಿಬಂಧ ಆರಾಧನೆಯನ್ನು ಮಾಡಬೇಕು.

ಪ್ರಪಂಚದಲ್ಲಿರುವ ಯಾವ ಚೆಲುವೆಯನ್ನೇ

ತಮ್ಮ ಹೃದಯದಲ್ಲಿ ನೋವು ಕಂಡವರು ಮಾತ್ರ ಬೇರೆಯವರ ದುಃಖಗಳನ್ನು ಅರ್ಥ ಮಾಡಿಕೊಳ್ಳಬಲ್ಲರು.

ಬಯಸಿದರೂ ಅವಳು ಒಲಿದು ಬಂದು ಸುಖ ಕೊಡುತ್ತಾಳೆ. "ಚಕ್ರ...."

ಪದ್ಮಾಸನ ಸ್ಥಿತಿಯಲ್ಲಿ ಕುಳಿತಿರುವ ಯುವಕ ಚಕ್ರ ಎದ್ದು ಬಂದು ಗುರು ಮಾಂತ್ರಿಕನಿಗೆ ನಮಸ್ಕರಿಸಿದನು. ಆಗ ತ್ರಿಪುರ "ನಿನ್ನ ಬಗ್ಗೆ ನನಗೆ ತುಂಬಾ ಹೆಮ್ಮೆಯಾಗುತ್ತಿದೆ. ಇದ್ದರೆ ನಿನ್ನಂತ ಶಿಷ್ಯ ಇರಬೇಕು. ನೀನು ಎಲ್ಲರಿಗಿಂತ ಹೆಚ್ಚು ಸಾಧನೆ ಮಾಡಿದ್ದೀಯ. ಮಾಂತ್ರಿಕ ಪ್ರಯೋಗಗಳಲ್ಲಿ ನೀನು ನನ್ನನ್ನು ಮೀರಿಸುತ್ತೀಯ". ಉಳಿದಿಬ್ಬರಿಗೆ ಇದರಿಂದ ಏನೋ ಒಂದು ರೀತಿ ಇರಿಸು-ಮುರಿಸು ಉಂಟಾಗಿ ನಿಂತಲ್ಲೇ ಚಡಪಡಿಸಿದರು.

ಕೋಪ .......... ಅಸಹನೆ ! ಜೊತೆಗೆ ಅಸೂಯೆ ! ತ್ರಿಪುರ "ಚಕ್ರ ........... ನಿನಗೆ ಈ ಮಾಂತ್ರಿಕ ವಿದ್ಯೆಯಲ್ಲಿ ಇನ್ನೂ ಸಾಧನೆ ಮಾಡಬೇಕೆಂಬ ಆಸೆ ಇದೆ ಅಲ್ಲವೆ ?"

"ಇದೆ ಗುರುಬಾಬಾ" "ತಕ್ಕನಾದ ಗುರುವನ್ನು ಹುಡುಕು" "ಆಗಲಿ ಬಾಬಾ" ತ್ರಿಪುರ "ನಿನಗೆ ಬೇರೆ ಏನಾದರೂ ಆಸೆ ಇದ್ದರೆ ಹೇಳು, ನಾನು ಮಾರ್ಗ ತೋರಿಸುತ್ತೇನೆ". "ನನಗೆ ಬೇರೆ ಆಸೆ ಇಲ್ಲ" "ಶ್ರೀಮಂತಿಕೆ, ಸುಖ, ಚೆಲುವೆಯರು" "ಇಲ್ಲ ಗುರು ಬಾಬಾ" ಆಶ್ಚರ್ಯದಿಂದ "ಹಾಗಾದರೆ ಈ ಮಾಂತ್ರಿಕ ವಿದ್ಯೆಯನ್ನು ಕಲಿತು ಏನು ಮಾಡುತ್ತೀಯ ?" ಚಕ್ರ "ಈ ವಿದ್ಯೆಯನ್ನು ನಾನು ಜನಗಳ ಉಪಕಾರಕ್ಕೆ ಯಾವ ರೀತಿ ಉಪಯೋಗಿಸಲು ಅಂತ ಈಗ ಆಲೋಚನೆ ಮಾಡುತ್ತಿದ್ದೇನೆ". ತ್ರಿಪುರ ಗಂಭೀರವಾಗಿ "ಅಂತಹ ಆದರ್ಶದ ಆಲೋಚನೆಗಳಿಂದ ಹೊಟ್ಟೆ ತುಂಬುವುದಿಲ್ಲ. ನೀನು ಬದುಕುವ ಮಾರ್ಗವನ್ನು ಹುಡುಕಬೇಕು". ಚಕ್ರ "ಬದುಕಲು ಬೇರೆ ರೀತಿಯ ಅನೇಕ ಮಾರ್ಗಗಳಿವೆ. ಈ ಪರಮ ಪವಿತ್ರವಾದ ವಿದ್ಯೆಯನ್ನು ನಾನು ನನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುವುದಿಲ್ಲ".

ತ್ರಿಪುರ "ನಿನ್ನಂತಹವರು ಏನು ಸಾಧನೆ ಮಾಡಿದರೂ ಅದರಿಂದ ಉಪಯೋಗ ಇಲ್ಲ. ನಿನ್ನ ಹುಚ್ಚು ಆದರ್ಶಗಳನ್ನು ಬಿಡುವುದಾದರೆ ನಾನು ನಿನಗೆ ಕೆಲವು ರಹಸ್ಯ ವಿದ್ಯೆಗಳ ಬಗ್ಗೆ ತಿಳಿಸುತ್ತೇನೆ".

ಚಕ್ರ "ಇಲ್ಲ...... ನಾನು ನನ್ನ ಜೀವನದ ಆದರ್ಶ ಮತ್ತು ನಿಯಮಗಳನ್ನು ಬಿಡಲಾರೆ".

"ಇದೇ ಕೊನೆ ನಿರ್ಧಾರವೆ ?"

"ಹೌದು".

ತ್ರಿಪುರ "ಹಾಗಾದರೆ ನೀನು ಇನ್ನು ನನ್ನ ಹತ್ತಿರ ಬರುವ ಅಗತ್ಯ ಇಲ್ಲ. ನೀನು ಹೊರಡಬಹುದು".

ಈಗ ಚಕ್ರ ಮತ್ತೊಂದು ಸಲ ನಮಸ್ಕಾರ ಮಾಡಿ ಅಲ್ಲಿಂದ ಹೊರಟನು. ಆಗ ಉಳಿದಿಬ್ಬರು ಇವನ ಕಡೆ ನೋಡಿ ವ್ಯಂಗ್ಯ ರೀತಿಯಲ್ಲಿ ನಗಾಡಿದರು.

ಸ್ವಲ್ಪ ಹೊತ್ತಿನ ನಂತರ ಗುರು ಮಾಂತ್ರಿಕ ತ್ರಿಪುರ ಮತ್ತು ಉಳಿದಿಬ್ಬರು ಸ್ಮಶಾನದಿಂದ ಹೊರಟರು.

ಆ ಸ್ಮಶಾನದಲ್ಲಿ ಮರದ ಹಿಂದೆ ಒಂದು ವ್ಯಕ್ತಿ ತುಂಬಾ ಹೊತ್ತಿನಿಂದ ಅಡಗಿಕೊಂಡಿತ್ತು.

ತನ್ನ ಜೀವನದ ಅವಧಿಯಲ್ಲಿ ಆ ವ್ಯಕ್ತಿ ಸ್ಮಶಾನಕ್ಕೆ ಬಂದಿರುವುದು ಇದೇ ಮೊದಲು !

ಆ ವ್ಯಕ್ತಿಗೆ ಎಂಬತ್ತು ವರ್ಷಗಳಾಗಿದೆ. ಊರುಗೋಲನ್ನು ಊರುತ್ತಾ ಬರುತ್ತಿದ್ದಾರೆ.

ಗೂನು ಬೆನ್ನು !
ಹಣ್ಣಾಗಿರುವ ಕೃಶ ಶರೀರ,
ಹತ್ತಿಯ ರೀತಿ ಬೆಳ್ಳಗಾಗಿರುವ ಕೂದಲು,
ಆ ವ್ಯಕ್ತಿ ಮಾಲಗಮ್ಮ !

ಯಾವತ್ತೂ ಸ್ಮಶಾನಕ್ಕೆ ಬಂದಿರದಿದ್ದ ಮಾಲಗಮ್ಮ ಈಗ ಬಂದಿರೋದು ಒಬ್ಬ ಯೋಗ್ಯ ವ್ಯಕ್ತಿಯನ್ನು ಪರೀಕ್ಷೆ ಮಾಡಲು ! ಮೊಮ್ಮಗನಿಗೂ ಹೇಳಲಾರದ ರಹಸ್ಯವನ್ನು ಯೋಗ್ಯ ವ್ಯಕ್ತಿಗೆ ಹೇಳಬೇಕು ಅಂತ ಈ ಮುದುಕಮ್ಮ ಪರೀಕ್ಷೆ ಮಾಡಲು ಬಂದಿದ್ದಳು. ಇವಳಿಗೆ ಮಹಾ ರಹಸ್ಯ ತಿಳಿದಿದೆ !

(ಮುಂದಿನ ಸಂಚಿಕೆ ನೋಡಿ)

---



ಇದ್ ಎಂತದ್‌ತ ನಿಙ್ಗೇ ಗೊತ್ತುಟಾ ? ಇದ್‌ಕ್ಕೆ ಹೇಳ್ದು ರಬ್ಬರ್ ಬಿಲ್ಲ್‌ತ. ಈ ರಬ್ಬರ್ ಬಿಲ್ಲ್‌ನ ಮಾಡಿಕೆ ಬಾಳ ಸುಲಾಭ. 6" ಉದ್ದದ ಹಸಿ ಮರದ ತುಂಡ್ ಬೇಕ್. 3" ಅಗಲಲಿ ಕೆತ್ತಿ ಪಟ್ಟಿ ಮಾಡಕ್ಕು. ಚಿತ್ರಲಿ ತೋರ್ಸಿದಂಗೆ ಕೆತ್ತಿ ಒಳಗಿನ ಬಾಗನ ತೆಗೆಯಕ್ಕು. ಸೈಕಲ್ ಚಕ್ರದ ರಬ್ಬರ್‌ನ ತಕ್ಕಂಡ್ 1/2" ಅಗಲಲಿ ಸುಮಾರ್ 1 ಅಡಿ ಉದ್ದ ಇರ್ರುಂಗೆ ತುಂಡ್ ಮಾಡಕ್ಕು. ಅದರ ಕವಡೆನ ಮ್ಯಾಲೆ ಭಾಗಕ್ಕೆ ಸುತ್ತಕ್ಕು. ಇನ್ನೊಂದು ತುದಿಗೆ ಚಕ್ಕಳದ ಇಲ್ಲ್ಯಾ ಹಾಳೆದ್ 2" ಉದ್ದಲಿ ತುಂಡ್‌ಮಾಡಿ ಅದರ ತುದಿಗೆ ಸಂಣ 2 ತೂತನ ಮಾಡಕ್ಕು. ಮತ್ತೆ ಚಿತ್ರಲಿ ತೋರ್ಸಿದಂಗೆ ಕಟ್ಟಕ್ಕು. ಈಗ ರಬ್ಬರ್ ಬಿಲ್ಲ್ ರೆಡಿ. ಹಾಳೆನ ತುದಿಗೆ ಸಂಣ ಕಲ್ಲ್ ಇಟ್ಟ್ ಬಿಲ್ಲ್‌ನ ಬಲಗೈಲಿ ಹಿಡ್ಕಂಡ್ ಎಡಕೈಲಿ ಕಲ್ಲ್ ಮತ್ತೆ ರಬ್ಬರ್‌ನ ತುದಿಂದ ಎಳ್ದ್ ಹಕ್ಕಿಗಳಿಗೆ, ಕಾಗೆಗಳಿಗೆ, ಗಿಡ್‌ಗಗಳಿಗೆ ಎಳ್ದ್ ಬುಡಕ್ಕು. ನಿಮ್ಮ ಗುರಿ ತಪ್ಪದಿದ್ದರೆ ಬ್ಯಾಟೆ ಗ್ಯಾರಂಟಿ. ಗದ್ದೆ ಏಕಲಿಗೆ ಹಾಕಿದ ಬೀಜ ತಿಂಬಕ್ಕೆ ಬರ್‌ವ ಗೀಜಕ್ಕಿಗಳಿಗೂ, ಬೆಳೆ ನಿಂತಿರ್‌ಕಾಕನ ಗೀಜಕ್ಕಿಗಳ್ನ ಓಡ್ಸಿಕ್ಕೆ, ಗದ್ದೆಂದ ಕೋಳಿಗಳ್ನ ಓಡ್ಸಿಕ್ಕೆ ಈ ಬಿಲ್ಲ್ ಬಹಳ ಒಳ್ಳೆದ್ ಆದೆ. ಈಗೆಲ್ಲಾ ಇದ್ರ ಉಪಯೋಗ ಬಹಳ ಕಮ್ಮಿ ಆಗಿಟ್ಟು. 1956ರ ಸುಮಾರಿಗೆ ನಾವೆಲ್ಲಾ ಸ್ಕೂಲಿಗೆ ಹೋಕನ ದನ ಮೇಯಿಸಿಕ್ಕೆ ಹೋಕನ ಇದೆ ಕೆಲ್ಸ ಆಗಿತ್ತ್. ಈಗಿನ ಮಕ್ಕ ಇದೆಲ್ಲಾ ಬೇಡದ ಕೆಲ್ಸತ್ತೇಳ್ಟೆ. ಹೆಂಗಿಟ್ಟು ಪರ್‌ಪಂಚ.

- ಪ್ರಭಾಕರ, ಸಂಗಾತಿ

---

ಒಂದು ಜೀವನ ಸಾಧನೆಯಿಂದಷ್ಟೆ ಹಿರಿಯದಾಗುತ್ತದಲ್ಲದೆ, ಕೇವಲ ಖ್ಯಾತಿಯಿಂದ ಅಲ್ಲ.

# ಒಕ್ಕಲಿಗ ಬಂಧು ನೀ ಒಂದಾಗಿ ಬಾ - ಒಂದಾಗು ಬಾ

*ಡಾ. ಗುಡ್ಡೆ ರಾಘವ ಗೌಡ, ಡೇಟನ್, ಒಹಾಯೊ,*
*(ಜುಲೈ ೫, ೨೦೦೨ರಂದು ವರ್ಜಿನಿಯ ಬೀಚಲ್ಲಿ ಜರುಗಿದ ಅಮೇರಿಕದ ಒಕ್ಕಲಿಗ ಪರಿಷತ್ತಿನ ಸಮಾರಂಭದಲ್ಲಿ ಓದಿದ ' ಕವನ)*

ಒಕ್ಕಲಿಗ ಬಂಧು ನೀ ಒಂದಾಗಿ ಬಾ -ಒಂದಾಗು ಬಾ
ವಿಶ್ವದೆಲ್ಲೆಡೆಯಿಂದ ಒಡಗೂಡಿ ಬಾ
ನಿನ್ನ ಹಿರಿಮೆಯ ಹಿರಿಯ ಗುರುತಿಸಲು ಬಾ
ನಿನ್ನ ಕಿರಿ ಕಂದರಿಗೆ ದಾರಿ ತೋರಲು ಬಾ

ಸಾಗರದ ತಟದಿಂದ, ಮಲೆನಾಡ ಮಡಿಲಿಂದ
ಕಾವೇರಿ, ಕುಮಾರಧಾರೆ, ಪಯಸ್ವಿನಿಯ ಒಡಲಿಂದ
ತೆನೆ ಸಿರಿಯ ಕಣಜದ ಬಯಲ್ನಾಡ ಕಡೆಯಿಂದ
ಒಕ್ಕಲಿಗ ನೀನಿಂದು ಒಂದಾಗಿ ಬಾ, ಒಂದಾಗು ಬಾ

ಹಿಮಗಿರಿಯ ಮಡಿಲಿಂದ, ಗಂಗೆಯಾ ಅಲೆಯಿಂದ
ಕಾಶ್ಮೀರದೆಲೆಯಿಂದ ಕನ್ಯಾಕುಮಾರಿಯಡಿಯಿಂದ
ಬಂಗಾಳ ಬನದಿಂದ, ಗುಜರಾತಿನ ಬಯಲಿಂದ
ಭಾರತಿಯ ಮಗು ನೀನು, ಒಂದಾಗಿ ಬಾ - ಒಂದಾಗು ಬಾ

ದುಡಿ ದುಡಿದು ದಣಿದಿರುವೆ, ಅಲೆದಲೆದು ಸೋತಿರುವೆ
ಪರರ ಸುಖಕಾಗಿ ನೀ ಸರ್ವಸ್ವ ಅರ್ಪಿಸಿಹೆ
ಗಡಿಯಲ್ಲಿ ಸೇನಾನಿ, ಬಯಲಲ್ಲಿ ನೇಗಿಲಯೋಗಿ
ಒಕ್ಕಲಿಗ ಕೂಟಕ್ಕೆ ಬಾ ಇಂದು ಒಂದಾಗಿ

ನಿನ್ನ ಬೆವರ ಹನಿಯಿಂದ ತಾಯ್ನೆಲವು ಸಿಂಚಿಹುದು
ನಿನ್ನ ಶೌರ್ಯದ ಬಲವು ಎಲ್ಲ ಮನೆ ಮಾತಾಗಿಹುದು
ನಿನ್ನ ಬಲಿದಾನವು ಎಲ್ಲರಿಗೂ ಮೆಚ್ಚಿಹುದು
ನಿನ್ನ ಪ್ರೇಮದ ಹೊನಲು ಎಲ್ಲೆಲ್ಲೂ ಹರಡಿಹುದು

ನೀ ನಡೆದ ದಾರಿಯನು ಹಿಂತಿರುಗಿ ನೋಡು
ನಿನ್ನ ಮುಂದಿನ ಜನಕೆ ಕಾಣಿಕೆಯ ನೀಡು
ಒಕ್ಕಲಿಗ ಕೂಟಕ್ಕೆ ಹೊಸ ಕನಸ ನೀಡು
ಮಲೆನಾಡ ಉನ್ನತಿಗೆ ನೀನು ಹೆಣಗಾಡು

ಇತಿಹಾಸ ಪುಟಗಳನು ತಿರುವಿ ನೀ ನೋಡು
ಮರೆಯದ ಮಣಿಗಳನು ಮತ್ತೊಮ್ಮೆ ಜೋಡು
ತಾಯ್ನೆಲಕೆ ತನುವಿತ್ತ ಹಿರಿಯರನು ನಮಿಸು
ಇಂದಿಗೆ ಮುಂದೆಗೆ ಹೊಸ ಕನಸ ನೆನೆಸು

ನೀನು ಬಂದಿಹೆಯಂತೆ ಗೌಡ ದೇಶದಿಂದ
ಗಂಗಾ ತಟದ ಈಗಿನ ಬಂಗಾಳದಿಂದ
ವಿಜಯನಗರದಲಿ ನೀನು ನೆಲೆಸಿದೆಯಂತೆ
ಮತ್ತೆ ಕರ್ನಾಟಕವನ್ನು ನೀ ಆಳಿದೆಯಂತೆ

ದಾರಿಯಲಿ ಬಂದೆಯಾ, ದೋಣಿಯಲಿ ಬಂದೆಯಾ ?
ಅಂಗ, ವಂಗ, ಕಳಿಂಗದಲಿ ನೀನೊಮ್ಮೆ ನಿಂದೆಯಾ ?
ಎಲ್ಲಿಯೂ ನಿಲ್ಲದೆಯೆ ನೀ ದಕ್ಷಿಣಕೆ ಬಂದೆಯಾ ?
ಕಾವೇರಿ ಮಗು ನೀನು ಆದಿಯಿಂದಿಲ್ಲಿದ್ದೆಯಾ ?

ಗತಕಾಲ ವೈಭವದ ಸಹಭಾಗಿ ನೀನು
ಗಂಗ, ಕದಂಬ, ರಾಷ್ಟ್ರಕೂಟರ ಒಡನಾಡಿ ನೀನು
ವಿಜಯನಗರ, ಇಕ್ಕೇರಿ, ಯಲಹಂಕದಲ್ಲಿದ್ದೆ
ಕೆಂಪೇಗೌಡನ ಜೊತೆಗೆ ಬೆಂಗಳೂರ ನೆಲೆಸಿದ್ದೆ

ಬಯಲ ಸೀಮೆಯ ಮರೆಸಿ ಮಲೆನಾಡ ಸೇರಿದ್ದೆ
ನೀ ನಡೆದ ನೆಲದಲ್ಲಿ ಸಿರಿಯನ್ನು ತಂದೆ
ಶಾಂತಿ ಕಾಲದಿ ರೈತ, ಯುದ್ಧದಲ್ಲಿ ಭಟ ನೀನು
ಪ್ರೇಮ, ಸೌಹಾರ್ದತೆಯ ಪ್ರತಿಮೂರ್ತಿ ನೀನು

ಸ್ವಾತಂತ್ರ್ಯ ಸಂಗ್ರಾಮದ ಇಪ್ಪತ್ತು ವರುಷಗಳ ಹಿಂದೆ
ಬಲಿದಾನ ಮಾಡಿರುವೆ ಎಲ್ಲರಿಂದಲೂ ಮುಂದೆ
ಇತಿಹಾಸ ಪುಟಗಳಲಿ ನಿನ್ನ ಮರೆತಿಹರು
ನಿನ್ನ ಕೆಚ್ಚೆದೆಯನ್ನು ಕೆಲವರೇ ಅರಿತಿಹರು

ಸಾವಿರದೆಂಟ್ನೂರ ಮೂವತ್ತೇಳನೆ ಇಸವಿಯ ಸುದ್ದಿ
ಕೊಡಗಿನ ಚಿಕ್ಕವೀರರಾಜ ಗದ್ದುಗೆಯಿಂದಿಳಿದಿದ್ದ
ಬ್ರಿಟಿಷರ ದಬ್ಬಾಳಿಕೆ ಬಲು ಜೋರಿನಲ್ಲಿತ್ತು
ಸ್ವತಂತ್ರತೆಯ ಬೆಳಕಿನ ಕಿಡಿ ಮಲೆನಾಡಿನಲಿ ಹರಡಿತ್ತು

ಗೌಡರು ಅಪರಂಪರ, ಕಲ್ಯಾಣ ಸ್ವಾಮಿಯ ಜೊತೆ ಸೇರಿ
ಕೆದಂಬಾಡಿ ರಾಮಪ್ಪ ಗೌಡ ನಡೆಸಿದ ಜಯಭೇರಿ
ಗುಡ್ಡೆ ಅಪ್ಪಯ್ಯ ಗೌಡ ಇದ್ದನಂದು ಜೊತೆಗೆ
ಗೌಡ ಸಮಾಜ ಎಚ್ಚೆತ್ತು ನಡೆಯಿತವರ ಜೊತೆಗೆ

ಅಮರ ಸುಳ್ಯದಲಿ ಸೇರಿದರು ಅಂದೆಲ್ಲ ಗೌಡರು
ಪುತ್ತೂರು ತಲಪಿದರು ಸಾವಿರದಿನ್ನೂರು ಭಟರು
ಮಂಗಳೂರ ವಶಪಡಿಸಿದರು ಆ ವೀರ ಸೈನಿಕರು
ಹದಿಮೂರು ದಿನಗಳ ತನಕ ಮಂಗಳೂರ ಆಳಿದರು

(14) ಸೌಜನ್ಯದಿಂದ ನಮಗೆ ನಷ್ಟವಿಲ್ಲದೆ ಬೇರೆಯವರಿಗೆ ಲಾಭವಾಗುತ್ತದೆ.

ಮಂಗಳೂರಲಿ, ಮಡಿಕೇರಿಯಲಿ ಗಲ್ಲಿಗೇರಿದರಂದು
ಗುಡ್ಡೆ ಅಪ್ಪಯ್ಯ, ರಾಮಪ್ಪ ಗೌಡರ ತಂಡ ಅಂದು
ಕಾಲದ ಮರೆಯಲ್ಲಿ ಅವರು ಮರೆಯಾಗಿಹರು
ನಿನ್ನ ಧಮನಿಗಳಲ್ಲಿ ದೇಶಪ್ರೇಮ ತುಂಬಿಹರು

ನವಯುಗದ ಮಹಾವೀರರು ಸಾವಿರಾರು
ದಶ ದಿಸೆಗೆ ಹರಡಿದೆ ಅವರೆಲ್ಲರ ಹೆಸರು
ಕೆ. ಹೆಚ್. ರಾಮಯ್ಯ, ಬಿ. ಪುಟ್ಟಯ್ಯ
ಕೆಂಗಲ್ ಹನುಮಂತಯ್ಯ, ಪಿಟೀಲು ಚೌಡಯ್ಯ

ಕನಕಪುರ ಕರಿಯಪ್ಪ, ಯಶೋಧರಾ ದಾಸಪ್ಪ
ಕನ್ನಡದ ವಾಲ್ಮೀಕಿ ಡಾ. ಕೆ. ವಿ. ಪುಟ್ಟಪ್ಪ
ನಿನ್ನನ್ನೊಟ್ಟಾಗಿಸಿಹುದು ಆದಿಚುಂಚನಗಿರಿ ಮಠ
ಒಂದಾಗಿ ಶ್ರಮಿಸಿದರೆ ಒಕ್ಕಲಿಗರ ಯಶಸ್ಸು ದಿಟ

ಒಕ್ಕಲಿಗ ಬಂಧು ನೀ ಬಂದುದಿಲ್ಲೇಕೆ ?
ಮಕ್ಕಳ ಮದುವೆಯ ಕನಸೊಂದು ಸಾಕೆ ?
ಕನಸೊಂದ ಕಟ್ಟು ನೀ ಒಕ್ಕಲಿಗ ಕೂಟಕ್ಕೆ
ಒಂದಾಗಿ ದುಡಿ ನೀ ಎಲ್ಲರಭ್ಯುದಯಕ್ಕೆ

ಕನಸೊಂದ ಕಾಣುತಿಹೆ ಬಹುದಿನಗಳಿಂದ
ನೀವೆಲ್ಲ ಕೇಳಿ - ಉದಾರ ಮನಸಿನಿಂದ
ಕಟ್ಟೋಣ ಬನ್ನಿ ಒಕ್ಕಲಿಗ ವಿಶ್ವವಿದ್ಯಾಲಯ
ಜ್ಞಾನ ಜ್ಯೋತಿಯ ಬೆಳಗೆ ಆದರ್ಶ ನಿಲಯ

ಡೊನೇಶನ್ ಕಾಲೇಜು ನಮ್ಮಲ್ಲಿ ಕಡಿಮೆಯಿಲ್ಲ
ಬಡವರಿಗೆ ವಿದ್ಯೆಯ ಸವಲತ್ತು ದೊರಕಿಲ್ಲ
ವಿದ್ಯೆಯ ವ್ಯಾಪಾರ ಸಮಾಜ ಸೇವೆಯೇ ಅಲ್ಲ
ಜಾತಿ ಮತ ಭೇದಗಳ ಮನೋವೃತ್ತಿ ಬೇಕಿಲ್ಲ

ಪಂಡಿತ ಮದನ ಮೋಹನ ಮಾಲವೀಯರ ಕನಸು
ಬನಾರಸ್ ಹಿಂದೂ ವಿಶ್ವವಿದ್ಯಾಲಯ ನೆಲೆಸಿದೆ ಸೊಗಸು
ಠಾಗೋರ್ ಕಟ್ಟಿಹರು ಸರಸ್ವತಿಯ ಸದನ
ವಿಶ್ವದೇಕೈಕ ನೂತನ ಶಾಂತಿನಿಕೇತನ

ಹಂತ ಹಂತದಲಿ ಬೆಳೆಯಲಿ ವಿದ್ಯಾಲಯ
ಅಮೇರಿಕದ ಒಕ್ಕಲಿಗರ ಕನಸಿನಾ ನಿಲಯ
ಹನಿಕೂಡಿ ಹಳ್ಳ, ತೆನೆ ಕೂಡಿ ಕಣಜದಂತೆ
ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತೆ

ಮೊದಲು ಹಾಕೋಣ ನಾವು ಸಣ್ಣ ಅಡಿಪಾಯ
ಆಸ್ಪತ್ರೆಗೆ, ಶಾಲೆಗೆ ಮಾಡೋಣ ಸಹಾಯ
ಸ್ಕಾಲರ್ಶಿಪ್, ಕಟ್ಟಡ, ಪುಸ್ತಕ, ಸವಲತ್ತು
ಟ್ರಸ್ಟಲ್ಲಿ ಇಟ್ಟುಬಿಡಿ ಹಿರಿಯರ ಹೆಸರಲ್ಲಿ ಮುತ್ತು

ಪ್ರತಿಯೊಂದು ಕುಟುಂಬ ತನ್ನ ಗ್ರಾಮವನ್ನು ಅಳವಡಿಸಿ
ಬೇಸಿಗೆಯ ರಜೆಯಲ್ಲಿ ಊರಿಗೆ ಮಕ್ಕಳನು ಕಳಿಸಿ
ಸೇವೆ ಮಾಡಲಿ ಅವರು ಶಾಲೆಗೆ, ಆಸ್ಪತ್ರೆಗೆ
ನಿಮ್ಮ ಹುಟ್ಟಿನ ನೆಲದ ಎಲ್ಲ ರೀತಿಯ ಏಳಿಗೆಗೆ

ಒಂದಾಗಿ ಬೆರೆಯಲಿ ರೈತ ಬಂಧುಗಳಲ್ಲಿ
ಅಕ್ಕರೆಯಿಂದ ಎಲ್ಲ ತನ್ನ ಬಾಂಧವರಲ್ಲಿ
ಅವರೇ ಹಾಕಲಿ ಹೊಸ ಕೆಲಸಕ್ಕೆ ಅಡಿಪಾಯ
ದೊರಕಲಿ ಇದರಿಂದ ಬಡವರಿಗೆ ಸಹಾಯ

ಒಟ್ಟಿಗೆ ಹಾಕೋಣ ನಾವು ವಿದ್ಯಾಲಯಕ್ಕೆ ಬುನಾದಿ
ಅತಿ ಉತ್ಸಾಹದಿಂದ ಹೊಸ ಕನಸಿಗೆ ನಾಂದಿ
ಬೆಳಗಲೀ ದೇಗುಲ ಮಲೆನಾಡ ಮಡಿಲಲ್ಲಿ
ಹರಡಲಿ ಅದರ ಖ್ಯಾತಿ ವಿಶ್ವದೆಲ್ಲೆಡೆಯಲ್ಲಿ

ನಾನು ನನ್ನದು ಎಂಬ ಮೋಹ ತ್ಯಜಿಸುತ ಬನ್ನಿ
ರಾಜಕೀಯದ ಕೂಟ ನೀತಿಯ ಮರೆತು ಬನ್ನಿ
ಕಿರು ಕಾಣಿಕೆಯಿಂದ ಒಕ್ಕಲಿಗರುಪ್ಪರಿಗೆ ತುಂಬುತ ಬನ್ನಿ
ಒಕ್ಕಲಿಗ ಪರಿಷತ್ತಿನ ವಿಶ್ವವಿದ್ಯಾಲಯ ಕಟ್ಟ ಬನ್ನಿ

ಸಪ್ತ ಸಮುದ್ರದಾಚೆ ಬಂದಿರುವೆ ನೀನು
ನಿನ್ನ ಸಾಧನೆಗೆ ಸದಾ ಹೆಮ್ಮೆ ಪಡು ನೀನು
ಕಿರಿಯರಿಗೆ ನಿನ್ನೂರ ಸಂಪರ್ಕ ಸ್ಥಾಪಿಸು ನೀನು
ವಿದ್ಯಾದಾನಕ್ಕಿಂತ ಹಿರಿಯ ಕನಸು ಇನ್ನೇನು ?

ಬಾ ಬಂಧು ಇಲ್ಲಿ ನೀ ಹಿರಿಯರನು ನಮಿಸಿ
ತನ್ನತನವನು ಅರಿಸಿ, ಪ್ರೀತಿ ಚಿಲುಮೆಯ ಪುಟಿಸಿ
ಗೆಳೆಯರನು ಒಲಿಸಿ, ಕಿರಿಯರನು ಕರೆಸಿ
ಒಗ್ಗಟ್ಟಿನಲಿ ಒಂದು ಹೊಸದಿಸೆಯನರಿಸಿ !

**ಲೇಖಕರ ಪರಿಚಯ :**

ಡಾ. ಗುಡ್ಡೆ ರಾಘವ ಗೌಡ ಅವರ ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕು. ಅವರು ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಇಲೆಕ್ಟ್ರಿಕಲ್ ಇಂಜಿನಿಯರಿಂಗ್ ಮತ್ತು ಎಂ.ಬಿ.ಎಂ. ವಿದ್ಯಾಭ್ಯಾಸವನ್ನು ಮುಗಿಸಿ ಡೆಲ್ಲಿಯ ಕೇಬಲ್ ಕಂಪೆನಿಯೊಂದರಲ್ಲಿ ಸೇಲ್ಸ್ ಮೆನೇಜರರಾಗಿ ಮತ್ತು ಕುರುಕ್ಷೇತ್ರ ವಿಶ್ವವಿದ್ಯಾಲಯದ ಬಿಸಿನೆಸ್ ಎಡ್ಮಿನಿಸ್ಟ್ರೇಷನ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಆ ಬಳಿಕ ಅವರು ಜೋರ್ಜಿಯ ಸ್ಟೇಟ್ ಯುನಿವರ್ಸಿಟಿಯಿಂದ ಕಂಪ್ಯೂಟರ್ ಇನ್ಫೊರ್ಮೇಷನ್ ಸಿಸ್ಟಂಸ್ನಲ್ಲಿ ಪಿ. ಎಚ್. ಡಿ. ಡಿಗ್ರಿಯನ್ನು ಪಡೆದರು. ಈಗ ಅವರು ಯುನಿವರ್ಸಿಟಿ ಆಫ್ ಡೇಟನಿನಲ್ಲಿ ಕಂಪ್ಯೂಟರ್ ಸೈನ್ಸ್ ವಿಭಾಗದ ಗ್ರಾಜ್ಯುವೇಟ್ ಪ್ರೋಗ್ರಾಮಿನ ಡೈರೆಕ್ಟರರಾಗಿದ್ದಾರೆ.

# ಜೀರ್ಣೋದ್ಧಾರ ಆಗದೆ ಬದಲಾದ ಕೆಲವು ಐನ್‌ಮನೆಗ

ಗೌಡ ಜನಾಂಗದ ನೂರಕ್ಕೆ ಎಪ್ಪತ್ತೈದ್‌ಕ್ಕೆ ಮೇಲ್ಪಟ್ಟ ಜನಗ ಐನ್ ಮನೇಲಿ ಹುಟ್ಟಿ ಅರೆ ವಯಸ್ಸಿಗೆ ಬಂದವು ಆಗಿದ್ದವೆ. ಗಾದೆ ಹೇಳ್ದೆ, ಕಾಲ ಬಂದಂಗೆ ಕೋಲಾ ಕಟ್ಟುದುತ ಹೇಳ್‌ವೆ. ಕಾಲ ಯಾಗೋಳು ಬದಲಾದುಲ್ಲೆ. ಅದೇ ಸೂರ್ಯ, ಅದೇ ಚಂದ್ರ, ಉಂಡೆ ಭೂಮಿ. ಇದ್ದಂಗೆ ಉಟ್ಟು. ಅದ್‌ಕೆ ಬದ್‌ಲಾಗಿ ಮನುಷ್ಯ ಬದಲಾಗುಟ್ಟು. ಪ್ರಪಂಚ ಸೃಷ್ಟಿ ಆಕನ ದೇವ್‌ರ ಹತ್ರ ಬೇಡಿಕಂಡ್ ಪ್ರಾಣಿಗಳ ಆಯುಷ್ಯ ಕಮ್ಮಿ ಮಾಡಿಸಿದನ್ನ ಆಯುಷ್ಯನ ಜ್ಯಾಸ್ತಿ ಮಾಡಿಸಿ ಕಂಡತ್. ಮನುಷ್ಯ್‌ಗೆ ಆಸೆ ಜ್ಯಾಸ್ತಿ. ದೇವರು ಬುದ್ಧಿ ಶಕ್ತಿ ಕೊಟ್ಟುಟ್ಟು. ಅದನ್ನ ಉಪಯೋಗಿಸಿ ಕೊಂಬಲೆ. ಏನೇನೊ ಮುಂದೇನ ಭವಿಷ್ಯಕ್ಕೆ ಆಸೆ ಬೆಳ್‌ದ್ ಕೆಲಸ ಕಾರ್ಯಗಳ್ಲೆ ವೈಮನಸ್ಸ್ ಬೆಳ್‌ದ್‌ನ ಮನೇನ ಬುಟ್ಟ್ ಬ್ಯಾರೆ ಮನೆ ಕಟ್ಟಿಕೊಂಡೊ. ಕೆಲವು ಚಾಕರಿ ಹಿಡ್ದ್ ಟೌನ್ ಸೇರ್‍ದ್ವೊ. ಹಂಗೇ ಮಾಡ್‌ದ್ವರ ಕಂಡ್ ಎಲ್ಲವೂ ಖಾಲಿ ಮಾಡ್‌ವೆ.

ಹಂಗೆ ಬದ್‌ಲಾದ ಐನ್ ಮನೆಗಳ್‌ಲಿ ಕೊಡ್‌ಗನ ಕೊಡಗನ ಐನ್‌ಮನೆ ಒಂದ್. ಕಳೆದ ಎಪ್ರಿಲ್ ತಿಂಗಳ್ಲಿ ಶ್ರೀ ವೆಂಕಟರಮಣ ದೇವರ ಹರಿಸೇವೆ ಮತ್ತೆ ಧರ್ಮದೇವತೆ ಗುಡಿಲಿ ದೈವದ ಕೋಲ ನಡ್ತ್. ಪ್ರಖ್ಯಾತಿ ಸುಳ್ಯದವು ಈ ಕೋಲನ ನಡ್ಸಿಕೊಟ್ಟೊ. ಹದಿನಾರ್ ಕೋಲಗ ಇದ್ದೋ. ಕೆಲವು ಜೋಡಿ ಕೋಲಗ ಇದ್ದೋ. ಸುಮಾರ್ ವರ್ಷ ಕೋಲ ನಡ್‌ಸದೆ ಇದ್ದಂದ ಆವೇಶ ಬಂದವು ಬ್ಯಾಗಬ್ಯಾಗ ಸುಸ್ತಾಗಿ ಬೀಳ್‌ತಿದ್ದೊ. ತೀರಿಹೋದವು ಹೆಣ್ಣ್ ಮಕ್ಕಳಿಗೆ ಹಿಡ್‌ಕಂಡ್‌ರ್‌ತ್ತಿದ್ದೊ. ಈ ಆತ್ಮಗ ಎಂದ್ ಸಾಯಕ್ಕಿಲ್ಲೆ. ಸೃಷ್ಟಿ ಅಳಿಯಕೆ ಮುಟ್ಟ ಒಂದ್ ಕಲ್ಲ್‌ನ ನಂಬಿ ಅದಿಕ್ಕೆ ಸೇವೆ ಮಾಡ್ರೆ ಮಾಡ್ತಾ ಇರೋಕು. ಹಂಗೇ ನಾನ್ ಕೊಡಗನ ಮನೆ ದೈವದ ಕೋಲಕ್ಕೆ ನಮ್ಮ ಸೋದರ ಮಾವನ ಮನೆಗೆ ಹೋಗಿರ್‌ಕನ ಮೂವ್ವತ್ತೈದ್ ವರ್ಷದ ಹಿಂದೆ ನಡ್‌ಡ್‌ಬಂದ ಐನ್ ಮನೇಲಿ ಕಳ್ದ ವಾತಾವರಣ, ಅನುಭವ ಪುನಃ ಸಿಕ್ಕುದಾತ ಗ್ಯಾನ ಆತ್. ಕೊಡಗನ ಮನೆಗೆ ಇನ್ನೊಂದ್ ಹೆಸ್ರ್ ಗುಂಡ್ಯದ ಮನೆತ, ಇವು ಕನ್ನಡ ಜಿಲ್ಲೆಂದ 1777ನೇ ಇಸ್‌ವಿಗೆ ಬಂದ್ ನೆಲೆಸಿದೊತೆಳ್ದೆ. ಕಾರ್ಯಪ್ಪತ್ತೇಳವು ಈ ಕುಟುಂಬದ ಹಿರಿಯವು ಆಗಿದ್ದೋ. ಇವುಕೆ ಲಿಂಗರಾಜರ ಅಳ್ವಿಕೆಲಿ ಬಂದ ಭೂಮಿ ಜಾಗ ಸುಮಾರ್ ಇತ್ತ್. ಕಾರ್ಯಪ್ಪನವು ಒಳ್ಳೆ ಅನುಭವ ಇದ್ದ ಮರಕೆತ್ತನೆ ಕೆಲಸಗಾರರ ಕೈಯಿಂದ ಪೋರ್ಲಾದ ನಡುಮಂದ ಐನ್‌ಮನೆನ 1815 ರ್ಲಿ ಕಟ್ಟಿಸಿದೋತ ಹಿರಿಯರ ಹೇಳಿಕೆ. ಕಾರ್ಯಪ್ಪನವರ ಮಂಜ್ಞನ ಹೆಸ್‌ರ್ ಬೆಳ್ಯಪ್ಪತ. ಅವರ ಹಿರಿ ಮಂಜ್ಞನ ಹೆಸ್ಸರ್ ಸುಬ್ಬಯ್ಯತ್ತೇಳಿ. ಅವೆ ನಮ್ಮ ಚಾಂಪ. ನಾನ್ ಸಣ್ಣವನಾಗಿರ್‌ಕನ ಅಲ್ಲಿ ಓದಿಕಂಡ್ ಇದ್ದೆ. ಮನೆನೇ ಕರಿಕತ್ತಲೆ. ಕತ್ತಲೆ ಕೋಂಬರೆಲಿ ಕಳ್ದ ದಿನಗ ಈಗೋಳು ಮರಿಯಕೆ ಆದುಲ್ಲೆ. ಚಾಂಪ ಚಾಮವ್ವ ಪಿಳ್ಳಿಗಳ್‌ನ ಪೋರ್ಲಾಗಿ ನೋಡಿ ಕೊಳ್ಳುತ್ತಿದ್ದೊ. ನಮ್ಮ ಚಾಂಪನು ಒಳ್ಳೆ ಕಟ್ಟ್‌ಮಸ್ತಾದ ಆಳ್. ಒಳ್ಳೆ ಎದೆಗಾರಿಕೆ, ರೋಷ ಬಾರಿ ಇತ್ತ್. ಸುತ್ತ ಮುತ್ತವೆಲ್ಲಾ ಹೆದ್‌ರ್‌ತ್ತಿದ್ದೊ. ನಾಲ್ಕೈದ್ ಜನ ಒಟ್ಟಿಗೆ ಬಂದರ್ ಎದ್‌ರ್‌ಸುವ ಎದೆಗಾರಿಕೆ ಇತ್ತ್. ಚಾಂಪ ಓದಿಕಂಡಿರ್‌ಕನ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಇವರ ಕ್ಲಾಸ್‌ಮೇಟ್ ಆಗಿದ್ದೊಗಡ. ಅವರಂಗೆ ಸಹ ಇವುಕ್ಕೆ ಮಿಲ್ಟ್ರಿಗೆ ಸೇರಿಕೆ ಇಸ್ಟ ಇತ್ತ್‌ಗಡ. ಆಗ ಇವರ ಪಾಲಿಗೆ ಒಂದು ನೂರು ಎಕ್ರೆ ಜಾಗ ಗದ್ದೆನ ನಡಿಸಿಕಂಡ್ ಹೋಕೆ ಆಗದೆ ಇವು ಮಿಲ್ಟ್ರಿಗೆ ಹೋಗುವ ಇಚ್ಚೆನ ಹಿಂದಕ್ಕೆ ಹಾಕಿದೊಗಡ.

ವಾರಕ್ಕೊಮ್ಮೆ ಮುಟೆ ಮುಟೆ ಯಾಲಕ್ಕಿನ ಮಡಿಕೇರಿಗೆ ನಡ್‌ಕಂಡ್ ಹೋಗಿ ಮಾರಿ ಬಾತಿದ್ದೋಗಡ. ಆಗ ನಮ್ಮ ಎರ್‌ಡ್ ಕಾಲ್‌ಗ ನಮ್ಮ ವಾಹನ ಆಗಿತ್ತ್. ಇವು ವಾಪಾಸ್ ಬಾಕಾಕನ ಮಧ್ಯರಾತ್ರಿ ಆಗ್‌ತಿತ್ತ್‌ಗಡ. ದಾರಿ ಮಧ್ಯಲಿ ಇವುಕ್ಕೆ ಹೆಣ್ಣ್ ಕೊಟ್ಟ ಮಾಂವನ ಮನೆ ಸಿಕ್ಕ್‌ತಿತ್ತ್. ನಮ್ಮ ಚಾಮವ್ವ ಬಂದದ್ದ್ ಪಟ್ಟಡ ಮನೆಂದ. ಅವರ ಅಪ್ಪನ ಹೆಸ್ರ್ ಬಿದ್ದಪ್ಪತ್ತೇಳಿ. ಇವು ಒಮ್ಮೊಮ್ಮೆ ಮಾಂವನ ಮನೆ ಹತ್ರ ಬಾಕನ ರಾತ್ರಿಲೀ ಜೋರಾಗಿ ಕರ್‌ದ್ ಎಚ್ಚರಿಸಿಕೆ ನೋಡ್‌ತಿದ್ದೊ. ಬ್ಯಾಗ ಏಳದಿದ್ದರೆ ಅವು ಜಗ್‌ಲೀಲಿ ಮಾಡಿ ಇಸಿದ್ದ ಪೊಡ, ಕುಕ್ಕೆ, ಗೊರ್‍ಗುಗಳನ್ನೆಲ್ಲಾ ಅವರ ಗದ್ದೆ ಮದ್ಯೆ ಇಸಿ ಮನೆಗೆ ಬಾತಿದ್ದೊಗಡ.

ಒಮ್ಮೆ ಇವು ರಾತ್ರಿ ಬಾಕನ ಇವರ ನಿಷ್ಠೂರದಂವ ಇವರ ಕೈಯಿಂದ ಪೆಟ್ಟ್‌ತಿಂದ್ ಓಡ್ಯಾಡಿಕೆ ಆಗದೆ ಮುಲೆ ಸೇರಿತ್ತ್‌ಗಡ. ಅಂವ ಇವರ ಕೊಲ್ಲಿಸಿಕೆ ಒಬ್ಬ ಗಟ್ಟಿಮುಟ್ಟಾದ ರಾಮತ್ತೇಳ್ವ ಮಲೆಯಾಳಿಗೆ ಚಾಕ್ ಕೊಟ್ಟ್ ಒಂದ್ ತಿರ್‍ಗಾಸಲಿ ಹೊಂಚ್ ಹಾಕಿಕೆ ಹೇಳಿ ಕುದ್ದಿತ್‌ಗಡ. ಆಗೆಲ್ಲಾ ನನ್ನ ಚಾಂಪ ಒಬ್ಬನೆ ಬಾತಿತ್ತ್‌ಗಡ. ಯಾರ್ ಸಹ ಒಟ್ಟಿಗೆ ಇರ್‌ತಿತ್ತ್‌ಲೆಗಡ. ಇವು ಆ ದಿನ ಬಾಕನ ರಾಮು ಒಮ್ಮೆಗೆ ಹಾರಿ ಇವರ ಎದೆಗೆ ಚಾಕ್‌ನ ಬೀಸಿತ್‌ಗಡ. ಆ ಕ್ಷಣ ಇವು ಚಾಕ್ ಸಮೇತ ಅಂವನ ಕೈನ ಹಿಡ್ದ್ ಅಂವನ ಪಡೆನೆಟ್ಟಿಗೆ ಒಂದ್ ಪೆಟ್ಟ್ ಕೊಟ್ಟೊಗಡ. ಆ ರಭಸದ ಪೆಟ್ಟಿಗೆ ಅಂವ ದೂರ ಹೋಗಿ ಬಿದ್ದಂವನ ಹಿಡಿಯಕ್ಕೆ ಹೋಕನ ಅಂವ ಚಾಕ್‌ನ ಬುಟ್ಟ್ ಕರಿಕತ್ತಲೇಲಿ ತಪ್ಪಿಸಿ ಕಣ್ತ್‌ಗಡ. ಮಲೆಯಾಳಿ ರಾಮ ಅದೇ ರಾತ್ರಿ ಗ್ಯಾನ ಮಾಡ್ತ್ ಇನ್ನ್ ಬೆಳಕ್ ಹರ್‍ದ ಮ್ಯಾಲೆ ನನ್ನ ಮೂಳೆನ ಇವು ಹೊಡಿ (ಪುಡಿ) ಮಾಡ್‌ವೋ. ಇವರ ಕೈಯಿಂದ ಪೆಟ್ಟ್‌ತಿಂದ್ ನರಕ ಪಡ್ತುಬ್ಯಾಡತ್ತೇಳಿ ಬೆಳ್‌ಗಾಕನ ನೇಣ್ ಹಾಕಂಡ್ ಸತ್ತಿತ್‌ಗಡ.

ಹಿಂದೇನ ಕಾಲದವುಕ್ಕೆ ಅಸ್ಟ್ ಸೂರತನ ಇತ್ತ್. ನಮ್ಮ ಚಾಂಪಂಗೆ ಕೊಡಗನ ಹುಲಿತ್ತೇಳಿ ಹೆಸರ್ ಹಾಕಿದ್ದೊ. ಈಗಳೂ ಸನ ಚಾಂಪಂದಿರ ವಂಶಗತವಾಗಿ ಬಂದ ಕೆಲವು ಜನಿಕೆ ಆ ಎದೆಗಾರಿಕೆ ಉಟ್ಟು. ಮತ್ತೆ ಕೆಲವು ತಮ್ಮ ಮಕ್ಕಳಿಗೆ ಅವರ ಹೆಸ್ರ್ ಹಾಕ್ಕೊಳೊ. ಇಂತಹ ಐನ್ ಮನೆಗಳ್ನ ಹಿಂದೆನವು ರಟ್ಟೆ ಶಕ್ತಿಲಿ ಕಟ್ಟಿದಂಗೆ ಈಗ ಸಾಧ್ಯ ಇಲ್ಲೆ. ಈಗೆಲ್ಲಾ ಬ್ಯಾರೆ ಬ್ಯಾರೆ

19 ನೇ ಪುಟಕ್ಕೆ

ನಮಗೆ ತೊಂದರೆಯಾದಾಗ ಜೀವನ ಕುಂಟುತ್ತ ನಡೆದಾಗ ಅಂಜಬಾರದು.

### *ಬಾಲ ಸಂಗಾತಿ ವಿಭಾಗ : ಜ್ಞಾನ -23*

### ಶಾಲೇಲಿ ಹೇಳಿಕೊಟ್ಟಿದ್ದೆಲ್ಲಾ ನಿಜ ಅಲ್ಲಾ

**ಭಾರತದ ಸಾಂಸ್ಕೃತಿಕ ಸಾಮ್ರಾಜ್ಯ- 3,** ***ಹಿಂದೂ ಸಂಸ್ಕೃತಿಯ ದಿಗ್ವಿಜಯ***

***ಭೌಗೋಳಿಕ ಹಿನ್ನೆಲೆ:-*** ಪ್ರಪಂಚದ ಭೂಪಟಲಿ ಭಾರತದ ಸ್ಥಾನನ ಗಮನಿಸಿ. ಇದ್ ಪೂರ್ವ ಮತ್ತೆ ಪಶ್ಚಿಮ ದೇಶಗಳ ನಡುನ ಸಂಪರ್ಕಕ್ಕೆ ಅನಿವಾರ್ಯ ಆದ ಹಾದಿಲಿ ಉಟ್ಟು. ಅಮೇರಿಕ ಖಂಡದ ಅನ್ವೇಷಣೆ ಆಗುವವರೆಗೆ ಇದ್ ಹೆಚ್ಚೂ ಕಡಿಮೆ ಕಡ್ಡಾಯತ್ತೇಳುವ ಪರಿಸ್ಥಿತಿ ಇತ್ತ್. ಪುರಾತನ ಪ್ರಪಂಚಲಿ ಪೂರ್ವ ಪಶ್ಚಿಮ ಸಂಪರ್ಕ, ರೇಶ್ಮೆ ಮಾರ್ಗ ಮತ್ತೆ ಸಂಬಾರ ಪದಾರ್ಥ ಮಾರ್ಗತ್ತೇಳುವ ಎರ್ಡ್ ಮಾರ್ಗಗಳ್ಳಿ ಸಾಗ್‌ತ್ತಿತ್ತ್.

***ರೇಶ್ಮೆ ಮಾರ್ಗ :-*** ಯುರೋಪ್ ಮತ್ತೆ ಪಶ್ಚಿಮ, ಚೀನಾ, ಏಷಿಯಂದ ಹೊರ್ಟ್ ಸೇರುವ ಈ ಭೂಮಾರ್ಗ ಭಾರತದ ವಾಯುವ್ಯ ಭಾಗಕ್ಕೆ ಹತ್ರ. ಅಷ್ಟೇ ಅಲ್ಲ, ಕೆಲವು ಕಾಲ ಈ ಮಾರ್ಗದ ಕೆಲವು ಭಾಗ ಭಾರತದ ರಾಜಕೀಯ ಅಧಿಪತ್ಯಕೆ ಸೇರಿತ್ತ್. ಪಂಡ್‌ಂದನೂ ಭಾರತೀಯರಿಗೆ ಈ ಮಾರ್ಗ ಗೊತ್ತಿತ್ತ್. ಅಶೋಕ ಚಕ್ರವರ್ತಿಯ ಧರ್ಮಪ್ರಸಾರ ಕಾರ್ಯ ಸಾಗಿದ್ ಈ ಮಾರ್ಗಲೇ. ಇನ್ನೊಂದು ಹಂಸ ಮಾರ್ಗ ಇದ್ದ್ ಭಾರತದ ಒಳನಾಡ್‌ಂದ ಹೊರ್ಟ್ ಪೆಷಾವರ್ (ಪುರುಷಾಪುರ) ಸ್ವಾತ್ (ಸ್ವಾತಿ) ಕಣಿವೆ ಮೂಲಕ ಸಾಗಿ ಹಂಸ ರಾಜ್ಯದ (ಈಗಿನ ಕಾಶ್ಮೀರದ) ಉತ್ತರ ತುದಿಲಿರುವ ಹುನ್‌ಸಾ) ಮೂಲಕ, ಕರಾಕೋರಂ ಕಣಿವೆನ ದಾಟಿ ಸಿಂಕಿಯಾಂಗ್ ಪ್ರಾಂತದ "ನೋಕು" ನಗರದ ಮೂಲಕ "ಸುಲೋ"ತ್ತೇಳುವ ನಗರದ ಹತ್ರ ರೇಶ್ಮೆ ಮಾರ್ಗನ ಸೇರ್ತಿತ್ತ್. ಹಂಸ ಪಕ್ಷಿಗಳ (Siberian Crane) ವಲಸೆಯ ಮಾರ್ಗ ಇದರ ಸ್ವಲ್ಪ ಭಾಗವಾದ ಕಾರಣ ಇದ್‌ಕ್ಕೆ "ಹಂಸ ಮಾರ್ಗತ್ತೆಳುವ ರಮಣೀಯ ಆದ ಕಾವ್ಯಮಯ ಹೆಸ್ರ್ ಬಂದುಟು.

ಸಂಬಾರ ಪದಾರ್ಥಗಳ ಮಾರ್ಗ : [Spice Road] ಇದ್ ವಿಶಾಲ ಸಮುದ್ರ ಮಧ್ಯ ಚಲಸದೇ, ಕರಾವಳಿಯ ಹತ್ರಲೇ ಚಲಿಸುವ ಜಲಮಾರ್ಗ. ಪ್ರಾಚೀನ ಕಾಲಲಿ ವಾಣಿಜ್ಯ ಹಿಂಗೇ ಸಾಗ್‌ತ್ತಿತ್ತ್. ಕಪ್ಪು ಸಮುದ್ರಂದ ಸಿಂಗಪುರದವರೆಗೆ ಹಿಂದೂ ಸಾಗರಲಿ ಪ್ರಯಾಣ. ಮುಂದೆ ಏಷ್ಯದ ಉತ್ತರ ತುದಿಯವರೆಗೆ ಫೆಸಿಫಿಕ್ (ಶಾಂತ) ಸಾಗರಲಿ ಕರಾವಳಿಗೆ ಹತ್ರವೇ ಸಂಚಾರ, ಈ ಜಲಮಾರ್ಗದ ಮಧ್ಯೆ ಇರುವ ಕಾರಣ ಭಾರತ ಪೂರ್ವ ಪಶ್ಚಿಮ ವಾಣಿಜ್ಯ ಕೇಂದ್ರ ಆತ್. ರತ್ನಾಕರ (ಈಗಿನ ಅರಬ್ಬಿ ಸಮುದ್ರ) ತೀರಲಿ, ಸಿಂಧ್ ಪ್ರದೇಶಂದ ಸುರುಮಾಡಿ ಕೇರಳದ ತುದಿವರೆಗೆ ಸೌವೀರ, ಪಾತಾಳ, ದ್ವಾರಕಾ, ಪ್ರಭಾಸ, ಕಲ್ಯಾಣ, ಗೋಮಂತಪುರ, ಹೊನ್ನಾವರ, ನೀಲೇಶ್ವರ ಮುಂತಾದ ರೇವು (ಬಂದರು)ಗ ಇದ್ದೊ. ಮುಂದೆ ಮಹೋದಧಿಲಿ (ಈಗಿನ ಬಂಗಾಳಕೊಲ್ಲಿ) ಪೂಂಪುಹಾರ್ (ಕಾವೇರಿ ಪಟ್ಟಣಂ) ಮಸಲಿಪಟ್ಟಣ, ವೆಂಗಿಪುರ, ಕೋಣಾರ್ಕ, ತಾಮ್ರಲಿಪಿ ಮೊದಲಾದ ರೇವುಗ ಇದ್ದೊ. ಇವುಗಳ ಮೂಲಕ ಸಂಚಾರ ಮತ್ತೆ ವಾಣಿಜ್ಯಗ ಸಾಗ್‌ತಿತ್ತ್. ಹಿಂಗಾಗಿ ಪ್ರಾಚೀನ ಜಗತ್ತ್‌ನ ನಿಖರ ತಿಳಿವು ಭಾರತೀಯರಿಗೆ ಎಂದಿನಿಂದಲೋ ಇತ್ತ್. ಪೂರ್ವ ಸಮುದ್ರ ನಮ್ಮ ಹಿಂದೂ ನಾವಿಕರಿಗೆ ದೇವಾಲಯದ ಮುಂದೆನ ಕೆರೆತರ ಲೀಲಾಜಾಲ ಸಾಗಾಣಿಕೆಯ ಮಾರ್ಗ, ಆಗಿತ್ತ್‌ತ ಬೃಹತ್ ಕಥಾ ಮುಂತಾದ ಪ್ರಾಚೀನ ಕಾವ್ಯಗಳ್ಳಿ ಉಲ್ಲೇಖ ಉಟ್ಟು.

ಮುಂದ್‌ವರ್ದದೆ

- ಬಿಟ್ಟೀರ ಚೊಂದಮ್ಮ ಶಂಭು, ಬೆಂಗಳೂರು.

### *ಬಾಲ ಸಂಗಾತಿ ವಿಭಾಗ : ಕಥೆ -23*

### ತುಂಬಿದ ಬಿಂದಿಗೆ ತುಳ್ಕುದುಲೆ

ಪಂಡ್‌ನ ಕಾಲಲಿ ಒಂದು ರಾಜ್ಯ ಇತ್ತ್. ಆ ರಾಜ್ಯದ ಒಂದು ಗ್ರಾಮಲಿ ಒಂದು ಆಶ್ರಮ ಇತ್ತ್. ಆಶ್ರಮವಾಸಿಗ ಯಾಗೋಳು ದೇವರ ನಾಮಜಪನ ವಿಶೇಷ ರೀತಿಲಿ ಮಾಡ್ತಿದ್ದೊ. ಈ ವಿಷಯ ಜನಜನಿತ ಆಗಿ ರಾಜನ ಕಿವಿಗೆ ಬಿದ್ದತ್. ರಾಜಂಗೆ ಬಾಳ ಖುಷಿ ಆತ್. ತನ್ನ ರಾಜ್ಯಲಿ ಈ ತರದ ಆಶ್ರಮ ಸತ್ಸಂಗ ಇರ್ದು ಹೆಮ್ಮೆ ಆತ್. ಸದಾಕಾಲ ದೇವರ ಜಪಂದ ತನ್ನ ನಾಡಿಗೆ ಮತ್ತೆ ಜನತೆಗೆ ಒಳ್ಳೆದಾದೆ. ನಾಡಿಗೆ ಒಳ್ಳೆದರ್ನ ಮಾಡುವ ಈ ಆಶ್ರಮ ವಾಸಿಗಳಿಗೆ ತಾನ್ ಏನಾದರ್ ಸಹಾಯ ಮಾಡೋಕುತ ಗ್ಯಾನ ಮಾಡಿ ಮಂತ್ರಿನೊಟ್ಟಿಗೆ ಆಲೋಚನೆ ಮಾಡಿ, ಆಶ್ರಮವಾಸಿಗಳಿಗೆ ಊಟ ಉಪಚಾರ ಬಟ್ಟೆ ಬರೆಗಳ ವ್ಯವಸ್ಥೆ ಮಾಡ್ತ್. ಸ್ವಲ್ಪ ಕಾಲ ಕಳ್ದ ಮೇಲೆ ರಾಜಂಗೆ ಒಂದು ಅನುಮಾನ ಬಾತ್ ಯಾರೋ ಹೇಳ್ದ ಮಾತ್‌ನ ಕೇಳಿಕಂಡ್ ತಾನ್ ಆಶ್ರಮ ವಾಸಿಗಳ ಯೋಗಕ್ಷೇಮ ನೋಡಿಕಂಬದು ಸರಿನಾತ ? ಗ್ಯಾನ ಮಾಡ್ತ್. ರಾಜ ತನ್ನ ಆಪ್ತ ಸೇವಕನ ಒಬ್ಬನ ಕರ್ದ್ ಆಶ್ರಮ ವಾಸಿಗಳ ಚಟುವಟಿಕೆನ ತಿಳ್ದ್ ಬಾತ ಕಳ್ಸಿತ್. ಸೇವಕ ಎರಡ್ ದಿನ ಆಶ್ರಮಲಿ ಯಾರಿಗೂ ಅನುಮಾನ ಬರದಂಗೆ ಎರಡ್ ದಿನ ಇತ್ತ್. ಆಮೇಲೆ ಬಂದ್ ರಾಜಂಗೆ ಹೇಳ್ತ್. ನೀವು ಹೇಳುವಂತ ವಿಶೇಷ ಏನು ಇಲ್ಲೆ. ಮಾಮೂಲಾಗಿ ಎಲ್ಲವೂ ಮಾಡುವಂಗೆ ಬೆಳಿಗ್ಗೆ ಸಾಯಂಕಾಲ ದೇವರ ನಾಮಸ್ಮರಣೆ ಸ್ವಲ್ಪ ಹೊತ್ತುನಡ್ದದೆ. ಮತ್ತೆ ಮಾಮೂಲಾಗಿ ಊಟ ನಿದ್ದೆತ ಕಾಲ ಕಳ್ದವೆತ. ರಾಜಂಗೆ ಬಾಳ ಬೇಜಾರಾಗಿ ತಕ್ಷಣ ಆಶ್ರಮಕೆ ಕಳ್ಸ್‌ತಿದ್ದ ಸಹಾಯನ ನಿಲ್ಸಿದೆ. ಆಶ್ರಮದ ಗುರುಗಳ್ನ ಕರ್ಸಿ ವಿಚಾರ್ಸಿತ್. ರಸ್ತೆ ಬದಿಲಿ ಮರದ ಕೆಳ್ಗೆಲ್ಲವೂ ಈ ತರ ದೇವರನಾಮ ಜಪ ಮಾಡುವೆ. ನೀವು ಯಾಕೆ ಸುಳ್ಳು ಸುದ್ದಿ ಹಬ್ಬಿಸಿದ್‌ತಕೇಳ್ದೊ. ಗುರುಗ ಶಾಂತ ಮುಖಭಾವಲಿ ನಾವು ಯಾವ ಸುದ್ದಿನೂ ಹಬ್ಬಿಸಿತ್‌ಲೆ. ನಮ್ಮ ಆಶ್ರಮಲಿ ಇರುವ ವಿಶೆಷ ಜನಜನಿತ ಆಗಿ ಹರಡಿದ್ ಅಷ್ಟೆ. ಬೇಕಾದರೆ ನೀವೇ ಪರೀಕ್ಷೆ ಮಾಡಿ, ಈ ಕಮಂಡಲದ ನೀರ್‌ನ ನೀವು ಹೇಳುವ ಜನರ ಮೇಲೆ ಚಿಮುಕಿಸಿ ಕೊನೆಗೆ ಆಶ್ರಮವಾಸಿಗಳ ಮೇಲೆ ಜಮುಕಿಸಿ ನೋಡಿತ್ತೆಳಿ ತಾವೂ ಜೊತೆಲೆ ಹೋದೊ. ರಾಜ ಸಾಮಾನ್ಯರ ತರ ವೇಷ ಮರೆಸಿಕಂಡ್ ರಸ್ತೆ ಕರೆಲಿ ಮಲ್ಗಿದ ಒಬ್ಬನ ಮೇಲೆ ನೀರ್ ಚಿಮುಕಿಸಿತ್. ಅಂವ ಜನ, ನಿದ್ದೆ ಮಾಡಿಕು ಬಿಡುದುಲೆಲ ಎಂತಾ ಜನಪ್ಪತ ಗೊಣ್ಗಿಕಂಡ್ ಮಗ್ಗ್‌ಲ್ ಬದ್‌ಲ್ಸಿತ್. ರಾಜ ಮರದ ಕೆಳಗೆ ಮಲ್ಗಿದಂವಂಗೆ ಚಿಮುಕಿಸಿತ್. ಅಂವ ಎದ್ದ್ ಮೇಲೆ ನೋಡಿ ಯಾವುದೊ ಪ್ರಾಣಿ ಅಥವಾ ಪಕ್ಷಿಗ ಮೂತ್ರ ಮಾಡಿರುಕುತ ಗ್ಯಾನ ಮಾಡಿ ಗೊಣ್‌ಗಿಕಂಡ್ ಒರ್ಸಿಕಂಡ್ ತಿರ್ಗಿಮಲ್ಗಿತ್. ರಾಜ ಅಲ್ಲಿಂದ ಆಶ್ರಮಕ್ಕೆ ಬಾತ್ ಅಲ್ಲಿ ವಿಶಾಲ ಪಡಶಾಲೆಲಿ ಮಲ್ಗಿದ ಒಬ್ಬರ ಮೇಲೆ ಚಿಮುಕಿಸಿ ನೋಡ್ದೊ. ಅಂವ ತಕ್ಷಣ ನಾರಾಯಣ ನಾರಾಯಣತ ಹೇಳಿಕಂಡ್ ಕಣ್ಣುಜ್ಜಿಕಂಡ್ ಎದ್ದ್‌ಕುದ್ದತ್. ಇನ್ನೊಬ್ಬ ರಾಮರಾಮತ ಮತ್ತೊಬ್ಬ ಕೃಷ್ಣಾತ ಹಿಂಗೆ ಎಲ್ಲವೂ ಒಂದಲ್ಲ

ಒಂದು ದೇವರ ನಾಮಸ್ಮರಣೆ ಮಾಡಿಕಂಡರೇ ವಿನಾ ಒಂದೇ ಒಂದು ಅಪಶಬ್ದ ಬಾತ್ಲೆ. ರಾಜಂಗೆ ಆಶ್ಚರ್ಯ ಆತ್. ಗುರುಗ ಹೇಳ್ಡೊ. ಇದೇ ಆಶ್ರಮವಾಸಿಗಳಿಗೂ ಬೇರೆಯವುಕು ಇರುವ ವ್ಯತ್ಯಾಸಗ. ತುಂಬಿದ ಬಿಂದಿಗೆ ತುಳ್ಕುದುಲೆ. ಅದೇ ತರ ಆಶ್ರಮ ವಾಸಿಗ, ಅವು ಮೇಲ್ನೋಟಕ್ಕೆ ಏನೇ ಕೆಲ್ಸ ಮಾಡಿರು ಅವರ ಅಂತರಾತ್ಮ ಸದಾ ಜಾಗೃತ ಆಗಿ ನಾಮಸ್ಮರಣೆ ಮಾಡ್ತಾ ಇದ್ದದೆತ ಹೇಳ್ಡೊ. ರಾಜಂಗೆ ಬಾಳ ಸಂತೋಷ ಆಗಿ, ತಾನ್ ನಿಲ್ಸಿದ್ದ ಸಹಾಯನ ಮತ್ತೆ ನಿರಂತರ ಆಗಿ ಆಗುವ ಹಂಗೆ ಮಾಡ್ತ್.

- ಮುಂದ್‌ವರ್ದದೆ

- ಬಿಟ್ಟೀರ ಚೊಂದಮ್ಮ ಶಂಭು.

---

17 ನೇ ಪುಟದಿಂದ

ಕೈಲಿಲಿ ಮಾಡುವ ಕೆಲಸನೆಲ್ಲಾ ಮಿಶಿನ್‌ಗ ಮಾಡುವೆ. ಕೆಲವು ಮನೆಯವು ಐನ್‌ಮನೇನ ಜೀರ್ಣೋದ್ಧಾರ ಮಾಡುತಾ ಒಳೊ.

ಅವರ ಬೆನ್ನ್ ತಟ್ಟಕು. ಕೆಲವು ಮನೆಯವ್ರ ನೂರಾರು ಸರ್ತಿ ಸಭೆ ಕರ್ದ್ ಹಂಗೆ ಮಾಡಕು ಹಿಂಗೆ ಮಾಡಕುತ್ತೇಳಿ ಬ್ಯಾರೆ ಕಟ್ಟಿಕೆ ಸುರು ಮಾಡ್ಕೊಳೊ. ಕೊಪ್ಪ ಕೋಡುಗಳಲಿ ಮನೆ ಕಟ್ಟಿಕಂಡ್ ದೊಡ್ಡಮನೆ ಸಹವಾಸ ಬೇಡತ್ತೇಳಿಯೊಳೊ. ಈಗೀಗ ಒಟ್ಟಿಗೆ ಬಂದ್ ಸೇರ್ದುಲ್ಲೆ. ಕಷ್ಟಕರ ಆದೆ ಕೆಲವು ಮನೆಯವುಕ್ಕೆ. ಕೆಲವು ಐನ್ (ದೊಡ್ಡ) ಮನೆಗಳಲಿ ಮುಂಬಾಗಿಲ್ ಇದ್ದದೆ. ಹಿಂದೆ ಎಲ್ಲಾ ಖಾಲಿ ಜಾಗ. ಕೆಲವು ಮನೆಗಳಲ್ಲಿ ಜನನೇ ಇರ್ದುಲ್ಲೆ. ವಾಸ ಇಲ್ಲೆ, ದೀಪ ದೂಪ ಇಲ್ಲೆ. ಪೂಜೆ ಪುರಸ್ಕಾರ ಇಲ್ಲೆ. ದೇವರು ದೈವಗಳ ಆರಾಧನೆ ಇಲ್ಲೆ. ಹಿಂಗಿರ್‌ಕಾಕನ ನಾವೂ ಹೆಂಗೆ ಉದ್ಧಾರ ಆದು ? ನೀವೇ ಹೇಳಿ ? ಇದನ್ನೆಲ್ಲಾ ನೋಡಿರೆ ಕೊತ್ತಿನ ಕುತ್ತಿಗೆಗೆ ಗಂಟೆಮಣಿ ಕಟ್ಟುಂವ ಇದ್ದರೆ ಮಾತ್ರ ಗ್ಯಾರಂಟಿ ಆದೆ.

ಅಂತೂ ಕೊಡಗನ ಮನೆ ಪರವಾಗಿಲ್ಲೆತ್ತೇಳಕ್ಕ್. ಹಳೆ ಮನೇನ ಉಳ್ಸಿ ಕಂಡ್ ಸ್ವಲ್ಪ ಸಮಯದ ಹಿಂದೆ ಕೊಡಗನ ಮನೆಯವು ಪಟ್ಟೆದಾರ ಬಿದ್ದಪ್ಪನವು ಮತ್ತೆ ಮನೆಯವರ ಸಮ್ಮುಖಲಿ ಹರಿಸೇವೆ ಉತ್ಸವನ ಬಾರಿ ಪೋರ್ಲಾಗಿ ಲಾಯಕ್ಕಾಗಿ ನಡಿಸಿಕೊಟ್ಟೊ. ತುಂಬಾ ಜನ ಸೇರಿದ್ದೊ. ನಂಗೆ ನನ್ನ ಮಾಂವನ ಮನೆ ಹರಿಸೇವೆ ನೋಡಿ ಬಹಳ ಕುಷಿಯಾತ್. ನಾವ್ ಮಕ್ಕ ಆಗಿರ್‌ಕನ ಆಡ್ದ ಕಪಿಯಾಟ, ಚೇಷ್ಟೆಗಳ್ನ ಇತರರ ಒಟ್ಟಿಗೆ ಗ್ಯಾನ ಮಾಡಿಕಂಡೊ. ಹಂಗೆನೇ ಪ್ರತಿ ಗೌಡರ ಕುಟುಂಬದವು ಹರಿಸೇವೆ, ಪೂಜೆ ಪುರಸ್ಕಾರ, ದೈವಕೋಲಗ, ಗುಳಿಗ, ಪಂಜುರ್ಲಿ, ಪಾಶಾಣಮೂರ್ತಿ, ಅಜ್ಜಿಕುಟ್ಟಿ, ಪಾಶಾಣ ಮೂರ್ತಿ ಹಂಗೆ ಇತರ ದೈವ ದೇವರಿಗೆ ಕೊಟ್ಟ್‌ಕಂಡ್ ಹಿರಿಯರ್ ನಡ್ಸಿಕೊಂಡ್ ಬಂದದರ ಮುಂದ್‌ವರಿಸಿರೆ ಕಾಲ ಕಂಡವಕ್ಕೂ ಸಹ ತೃಪ್ತಿಯಾಗಿ ನಮ್ಮ ಮೇಲೆ ಅವರ ಆಶೀರ್ವಾದ ಸದಾ ಇದ್ದದೇತ ನನ್ನ ಗ್ಯಾನ.

- ತೆಕ್ಕಡೆ ರಘುನಾಥ, ಮುತ್ತಾರ್ಮುಡಿ

# ಮಕ್ಕಳಿಗಾಗಿ ಮಹಾ ಭಾರತ ಭಾಗ -8:

## *ಬಕಾಸುರನ ವಧೆ:*

ಏಕ ಚಕ್ರ ಪಟ್ಟಣಲಿ ಹಾರವರ ಬೀದಿಲಿ ಭೀಕ್ಷೆ ಬೇಡಿಕೊಂಡಿದ್ದೊ. ಅವು ಸಿಕ್ಕಿದ ಭಿಕ್ಷೆನ ಅವ್ವಂಗೆ ತಂದ್ ಕೊಡುತ್ತಿದ್ದೊ. ಅವು ಬಾಕನ ಹೊತ್ತಾದರೆ ಏನಾದರ್ ಕೆಟ್ಟದ್ ಅವುಟುತ ಬೇಜಾರ್ ಪಡ್‌ತಿತ್ತ್. ಕುಂತಿ ಐದ್ ಜನ ತಂದ ಭಿಕ್ಷೆನ ಪಾಲ್ ಮಾಡಿ ತಂದದಲ್ಲಿ. ಅರ್ಧ ಮಾಡಿ ಒಂದು ಪಾಲ್‌ನ ಭೀಮಂಗೂ ಇನ್ನೊಂದು ಅರ್ಧನ ಕುಂತಿ ಮತ್ತೆ ನಾಲ್ಕ್ ಜನರ್ಲಿ ಹಂಚ್‌ತಿತ್ತ್.

ಭೀಮಂಗೆ ವೃಕೋದರಂತ ಹೆಸರ್ ಇತ್ತ್. ವೃಕ ಅಂದರೆ ತೋಳ ನಂಗೆ ಹೊಟ್ಟೆ ಇರವಂತ ಅರ್ಥ. ತೋಳ ಎಷ್ಟು ತಿಂದರೂ ಅದಕ್ಕೆ ಸಮಧಾನ ಇಲ್ಲೆ. ಸಿಕ್ಕಿ ಸಿಕ್ಕಿದಂಗೆ ತಿನ್ನ್‌ತಾ ಇರೋಕು. ಹಂಗೆ ಭೀಮನೂ ಅಷ್ಟೆ, ಆಗಾಗ ತಿನ್ನುತ್ತಾ ಬೇಕು. ಇಲ್ಲಿ ಏಕಚಕ್ರ ಪಟ್ಟಣಕ್ಕೆ ಬಂದ್ ಸರಿಯಾಗಿ ಹೊಟ್ಟೆಗೆ ಸಿಕ್ಕದರ್‌ಂದ ಸ್ವಲ್ಪ ಲಾಚಾರ್ ಆಗಿತ್ತ್. ಇದರ್ನ ಕುಂತಿ ನೋಡಿ ಬಾಳಾ ಬೇಜಾರ್ ಪಟ್ಟ್‌ಕಂಡತ್. ಕಡೆ ಕಡೆಗೆ ಭೀಮಂಗೆ ಈ ತರದ ಜೀವನ ಅಭ್ಯಾಸ ಆತ್. ಅಂವ ಅಲ್ಲಿದ್ದ ಕುಂಬಾರಂಗೆ ಮಣ್ಣ್‌ನ್ ಎಳ್ಳಿ ಕೆ ಸಹಾಯ ಮಾಡ್‌ತಿತ್ತ್. ಭೀಮಾಂಗೆ ಮಣ್‌ನ ಎಳ್ಳ್‌ಕಾಕನ ಅಲ್ಲಿಗಾಗಿ ಹೋಗುತ್ತಿದ್ದ ಮಕ್ಕಳಿಗೆಲ್ಲಾ ಒಂದು ತಮಾಷೆ ಆಗಿತ್ತ್.

ಒಂದು ದಿನ ಪಾಂಡವು ಹೊರಗೆ ಭಿಕ್ಷೆಗೆ ಹೋಗಿರ್‌ಕಾಕನ ಭೀಮಸೇನ ಅವ್ವನೊಟ್ಟಿಗೆ ಮನೆಲೇಇತ್ತ್. ಆಗ ನೆರೆಮನೆವು ಜೋರಾಗಿ ಬಾಯಿ ಬಡ್‌ಕಂಡ್ ಬಂದದ್ದರ ಕೇಳಿ ಕುಂತಿ ಅಲ್ಲಿಗೆ ಹೋತ್. ಅಲ್ಲಿ ಒಬ್ಬ ಹಾರವ ಅವನ ಹೆಣ್‌ಗೆ ಕೆಟ್ಟ ಅದೃಷ್ಟ ಮುಟ್ಟಾಳ ಹೆಂಗಸೇ, ನಾವು ಎಲ್ಲಾದರ್ ಪೋಯಿ ಪಟ್ಟಣ ಬೇಡತ ಎಷ್ಟ್ ಹೇಳ್ರೂ ನೀನ್ ಕೇಳ್‌ತ್‌ಲೆ. ನಿನ್ನದೆ ಹಠ ಆತ್. ಇಲ್ಲಿ ನಿನ್ನ ಅವ್ವ ಅಪ್ಪ ಮತ್ತೆ ನೆಂಟ್ರ್ ಇಲ್ಲಿ ಇದ್ದ್ ಬದ್‌ಕಿ ಸತ್ತೋಳೋ. ಈ ಪಟ್ಟಣ ಬಿಟ್ಟ್ ಬ್ಯಾರೆ ಹೋಕೆ ಸಾಧ್ಯ ಇಲ್ಲೆತ ಇಲ್ಲೆ ಒಳ್ಳ ಕುಣೆಯಕೆ ಆತ್‌ತೇಳಿ ಬೊಯ್ಯುತ್ತಿತ್ತ್. ಈಗ ಹೆಣ್ಣಿನ ಸಾಯಕೆ ಕಳ್ಸಿಕೆ ಆದುಲೆ. ಹಂಗೆ ಕಳ್ಸಿ ಅವಂಗೆ ಬದ್‌ಕಿಕೆ ಆದುಲೆ. ಹಂಗೆ ಇನ್ನ್ ಅವುಕೆ ಒಬ್ಬು ಮಗಳು ಉಟ್ಟು. ಅವುಳ ದೇವ್ರುಗೆ ಹರಿಕೆ ಹೊತ್ತೊಳೋ. ಅವುಳ್ನ ಸಮಯಕ್ಕೆ ಸರಿಯಾಗಿ ಯೋಗ್ಯಂಗೆ ಕೊಡಕು. ಅವರ ಸಂತತಿಗೆ ಒಳ್ಳೆದಾಕೆ ಮಾಡ್ದ್. ಅದೇ ರೀತಿ ಒಬ್ಬನೇ ಮಂಣ್ಣನ ಕೊಡಿಕೆ ಕಷ್ಟದ ಕೆಲಸ.

ನಮ್ಮ ಸಂತತಿಯೇ ನಾಶ ಆಗಿ ಹೋದೆ. ಆದರಿಂದ ನಾವೆಲ್ಲ ಒಟ್ಟಿಗೆ ಸಾಯೋದು ಒಳ್ಳೆದ್‌ತ ಜೋರಾಗಿ ಕಿರ್‌ಚಿ ಅತ್ತತ್. ಈ ಮಾತ್‌ನ ಕೇಳಿ ಹೆಣ್ಣ್ ಹೇಳ್ತ್. ನಾನ್ ನಿಮ್ಮ ಹೆಣ್ಣಾಗಿ ನನ್ನ ಕರ್ತವ್ಯ ಮಾಡ್ತೊಳೆ. ನಾನ್ ಎರಡ್ ಮಕ್ಕಳ ಹೆತ್ತ್ ಕೊಟ್ಟೊಳೆ. ಅವರ್ನ ಸಾಂಕೊಳೆ ನಾನೇನಾರ್ ಸತ್ತರೆ ನಾನ್ ಮಕ್ಕಳ ಹಂಗೆ ಸಾಕುದು. ಗಂಡ ಇಲ್ಲದ ಹೆಣ್ಣ್‌ನ ಬಾಳ್ ತುಪ್ಪಕ್ಕೆ ಅದ್ದಿದ ಬಟ್ಟ್‌ನ ನಾಯಿಗ ಕಚ್ಚಿ ಎಳೆವ ರೀತಿಲಿ ಆದೆ, ಹೆಣ್ಣ್‌ಬಾಳ್ ನಾಯಿಗ ತುಪ್ಪ ಮೆತ್ತಿದ ಚಿಟ್ಲ್. ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಎಳ್ಕಂಡ್ ಚೂರು ಚೂರು ಮಾಡುವಂಗೆ ಆದೆ. ಅದೇ ರೀತಿ ಹೆಂಣಿಗೆ ಯಾರ್ ಪೋಷಣೆ ಮಾಡದಿದ್ದರೆ. ಕೆಟ್ಟ ಜನ ಅವಳ್ನ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಎಳ್ದವೆ. ಹಂಗಾಗಿ ಹೆಂಣ್ ನೀರ್‌ಂದ ಹೊರಗೆ ಬಂದ ಮೀನ್‌ನಂಗೆ ಹಾಳಾದೆ. ಆದ್ರಿಂದ ರಾಕ್ಷಸಂಗೆ ನನ್ನನ್ನ ಕೊಡ್ದು ಒಳ್ಳೆದ್. ನೀವು ಮಕ್ಕಳ ಲಾಯಿಕ್ ನೋಡ್ಕಣಿ, ನಿಮ್ಮ ಸೇವೆಲಿ ನಂಗೆ ಸಂತೋಷ ಆವುಟು. ಆದ್ರಿಂದ ನಾನ್ ಸತ್ತರೆ ಸ್ವರ್ಗಕ್ಕೆ ಹೋನೆ, ಯಾವ ಹೆಂಣ್, ಯಾರ್ ಸತ್ಯವಾಗಿದ್ದವೆವೋ ಸಾವಿಗೆ ಹೆದುರುದು ಬ್ಯಾಡ. ನನ್ನನ್ನ ತಬ್ಬಿ ಸಂತೋಷಂದ ಆ ರಾಕ್ಷಸನ ಹತ್ರ ಕಳ್ಸಿ. ನೀವ್ ಬೇರೆ ಹೆಂಣ್‌ನ ಮದುವೆ ಆಗಿ ಲಾಯ್ಕ ಪೋರ್ಲಿಲಿ ಇರಿತ ಹೇಳ್ದೆ.

ಈ ಮಾತ್ ಕೇಳ್ದ ಹಾರಂವ ಅವನ ಹೆಣ್ಣ್‌ನ ಪ್ರೀತಿಂದ ತಬ್ಬಿ ನಾನ್ ಪಾಪಿನೇ, ನಾನ್ ನಿನ್ನ ಬುಡಿಕೆ ಸಾಧ್ಯ ಇಲ್ಲೆ. ಹಂಗೆ ಮಾಡ್ರೆ ನಂಗೆ ನರಕ ಸಿಕ್ಕುದು ಖಂಡಿತ, ಪ್ರತಿ ಗಂಡಸ್‌ನ ಕರ್ತವ್ಯ ಅಂವನ ಹೆಣ್ಣ್‌ನ ಮಕ್ಕಳ ಸರಿಯಾಗಿ ನೋಡಿ ಕಂಬದುತ ಹೇಳ್ದೆ. ಅಷ್ಟೋತ್ತಿಗೆ ಅವರ ಮಜ್ಞ ಅಪ್ಪವ್ವನು ಮಾತಾಡ್ದ ಮಾತ್‌ಗಳ್ನ ಕೇಳಿ ಬೇಜಾರ್

ಮಾಡಿಕಂಡ್ ಹೇಳ್ತ್ " ನಾನ್ ನಿಮ್ಮನ ದಾಟಿ ಹೋಕೆ ಒಂದ್ ಸಂಣ ದೋಣಿ. ನಿಮ್ಮನ ದಾಟಿಸಿದ ಮ್ಯಾಲೆ ನಾನ್ ನನ್ನ ಸಂಣ ತಮ್ಮ ನಾವಿಬ್ಬರ್. ಬೇಗನೆ ಈ ಕಷ್ಟದ ಪ್ರಪಂಚಲಿ ನಾಶ ಆಗಿ ಹೋದವೆ. ನಮ್ಮ ಕುಟುಂಬ ಉಳಿದ್‌ರೆ ನನ್ನ ಒಬ್ಬನ ಸಾವ್ ಎಷ್ಟು ಒಳ್ಳೆ ಸಾವು. ನೀವ್ ನನ್ನ ಯೋಗ ಕ್ಷೇಮ ಗ್ಯಾನ ಮಾಡುದು ಆದರೆ ನನ್ನ ಆ ರಾಕ್ಷಸನ ಹತ್ರ ಕಳ್ಸಿತ ಹೇಳ್ತ್.

ಈ ಮಾತ್ ಕೇಳಿ ಅಪ್ಪವ್ವ ಕೇಳಿ ಅವುಳ ತಬ್ಬಿಕಂಡ್ ಮರ್‍ಗ್ಯೋ. ಇದರ್ನ ಕೇಳ್ದ ಸಂಣ ಹೈದ ಹೊಳೆವ ಕಣ್ಣ್‌ಗಳ್ಲಿ ಅಪ್ಪವ್ವನ ಹತ್ರ ಹೋಗಿ ಅಳ್ ಬೇಡಿ ಅಪ್ಪ, ಅಳ್ ಬೇಡಿ ಅವ್ವ, ಅಳ್‌ಬೇಡಿ ಅಂಣಯ್ಯತ್ತೇಳಿ ಅವರ ತೊಡೆಮ್ಯಾಲೆ ಕುದ್ದ್‌ಕಂಡ್ ಅವರ ಕಣ್ಣೊರಸಿಕಂಡ್ ಹಿಂಗೆ ಮಾಡ್ತ್. ಅಲ್ಲೆ ಹತ್ರ ಇದ್ದ "ಸೌದೆ ಕೊಳ್ಳಿನ ತಕ್ಕಂಡ್ ಈ ಸೌದೆ ಕೊಳ್ಳಿಂದ ಹೋಡ್ದ್ ಆ ರಾಕ್ಷಸನ ಕೊಂದನೆಂತ ಹೇಳ್‌ಕನ ಎಲ್ಲವು ನೆಗಾಡ್ತೊ. ಆದ್ರೆ ಅದ್ ಅವರ ವ್ಯಸನಕೆ ಕಾರಣ ಆತ್.

ಆ ಸಮಯಲಿ ಕುಂತಿ ದೇವಿ ಮನೆ ಒಳಗೆ ಬಂದ್ ಈ ದುಃಖಕ್ಕೆ ಕಾರಣ ಏನ್? ಅದಿಕ್ಕೆ ಏನಾರ್ ಸಹಾಯ ಬೇಕೂತ ಕೇಳ್ದ್. ಆಗ ಹಾರಂವ ಹೇಳ್ದ್. ತಾಯಿ ಇದ್ ನಿಮಿಗೆ ಸಹಾಯ ಮಾಡಿಕೆ ಆಗದ ದುಃಖ. ಈ ಪಟ್ಟಣ ಹತ್ರ ಒಂದ್ ಗುಹೆಲಿ ಒಬ್ಬ ಬಕಾಸುರತ್ತೇಳ್ವ ದುಷ್ಟ ರಾಕ್ಷಸ ವಾಸ ಮಾಡ್ತೆ. ಆ ರಾಕ್ಷಸ ಈಗ ಹದಿನಾಲ್ಕ್ ವರ್ಷದ ಹಿಂದೆ ಈ ಪಟ್ಟಣಕ್ಕೆ ಬಂದ್ ಎಲ್ಲರ್‌ನ ಸದೆ ಬಡಿದ್ ಈ ರಾಜನ ಕೈ ವಶಪಡಿಸಿಕ್ಕಂಡ್‌ಟ್ಟು. ಇಲ್ಲಿನ ಕ್ಷತ್ರಿಯ ರಾಜ ಇಲ್ಲಿಂದ ಬುಟ್ಟ್ ಬೇರೆ ಪಟ್ಟಣಕ್ಕೆ ಹೋತು. ಆ ರಾಜಂಗೆ ನಮ್ಮನ್ನ ಕಾಪಾಡಿಕೆ ಆತ್‌ಲ್ಲೆ. ರಾಕ್ಷಸ ಹಿಂದೆ ಗಂಡ್, ಹೆಂಣ್‌ಮಕ್ಕತ ಬೇದ ಇಲ್ಲದೆ ಅವಂಗೆ ಹೊಟ್ಟೆ ಇಸಿಕಾಕನ ಕೊಂದ್ ತಿಂಬತ್ತಿತ್ತ್. ಆದರೆ ಜನವೆಲ್ಲಾ ಸೇರಿ ಅವನ ದಮ್ಮಯ್ಯ ಹಾಕಿ ಒಂದ್ ಒಪ್ಪಂದ ಮಾಡ್ತೊ. ಅಂದರೆ ರಾಕ್ಷಸ ಮನ್‌ಸ್ ಬಂದಂಗೆ ಕೊಲ್ಲುದು ಬ್ಯಾಡ. ಒಂದೊಂದು ವಾರಕ್ಕೆ ಒಂದೊಂದು ಮನೆಂದ ಅನ್ನ ಮೊಸರ್ ಮಾಸ ಇನ್ನೆನಾದರ್ ತುಂಬಿದ ವಸ್ತ್‌ನ ಒಂದು ಗಾಡಿಲಿ ಒಬ್ಬ ಮನುಷ್ಯ ತಂದ್ ಕೊಟ್ಟದೇತ ಒಪ್ಪಂದ ಮಾಡಿಕಂಡ್ ಈಗ ಒಂದ್ ಮನೆಂದ ಈ ರೀತಿ ಮಾಡ್ತಾ ಒಳೊ. ಇಂದ್ ನಮ್ಮ ಸರದಿ ಬಂದುಟ್ಟು ಅದಕ್ಕಾಗಿ ನಾವ್ ದುಃಖ ಪಡ್‌ತ್ತ್ ಒಳೊ. ಇಲ್ಲೀವರ್ಗೆ ನಾವ್ಗೆ ಇವನ ಕೊಲ್ಲುವ ವೀರ ಯಾರ್ ಸಿಕ್ಕ್‌ತ್‌ಲ್ಲೆ. ಶೂರರನೆಲ್ಲಾ ಈ ರಾಕ್ಷಸ ಕೊಂದ್ ಹಾಕಿತ್. ಒಂದು ರಾಜ್ಯಲಿ ಇರುವ ರಾಜಶಕ್ತಿ ಇಲ್ಲದಿದ್ರೆ ಮದುವೆ ಆಗಿ ಮಕ್ಕಳ್ನ ಹುಟ್ಟಿಸಿ ಕಾಗದ್. ಒಂದ್ ದೇಶದ ಜನ್ರಿಗೆ ಸುಖ ಸಂಪತ್ ಇರ್ದು ಆ ದೇಶದ ರಾಜ ಒಳ್ಳೆಯಂವ ಆಗಿ ಶಕ್ತಿವಂತನಾಗಿದ್ದರೆ ಮಾತ್ರ ಅಲ್ಲಾ ಸಂಪತ್ ಹೆಂಣ್ ಮಕ್ಕಳಿಗೆ ಹೆದ್ರಿಕೆ ಇಲ್ಲದೆ ಬದ್‌ಕಕ್. ಇಲ್ಲದಿದ್ದರೆ ಜನ ತೊಂದರೆ ಪಟ್ಟ್‌ಕಂಡ್ ದುಃಖಂದ ಕಾಲ ಕಳೆಯಕ್ಕೆ ಆದೆ. ನಾವ್ಯಾರಿಗೂ ನಮ್ಮಲ್ಲಿ ಒಬ್ಬನ ರಾಕ್ಷಸನ ಹತ್ರ ಸಾಯಕ್ಕಾಗಿ ಕಳ್ಸಿ ಬದ್‌ಕ್‌ಕಾಕಿಲೆ. ಆದ್ರಿಂದ ನಮ್ಮ ಕುಟುಂಬದವೆಲ್ಲಾ ಆ ರಾಕ್ಷಸನ ಹತ್ರ ಹೋಗಿ ಅವಂಗೆ ಬಲಿ ಆದವೆ ತಾಯಿ.

ಈ ಮಾತ್‌ನ ನಿಮಿಗೆ ಹೇಳಿ ನಿಮ್ಮ ಮನ್‌ಸ್ಸಿನ ಬ್ಯಾನೆ ಮಾಡ್ತೆ. ದೇವರೇ ನಮ್ಮನ್ನ ಕಾಪಾಡೋಕು. ಈಗ ಹೇಳ್ದ ವಿಷಯ ರಾಜಕೀಯವಾಗಿ ಏಕಚಕ್ರ ನಗರಲಿ ನಡ್ವದ್ ಇನ್ನ್ ಮುಂದೆಕ್ಕು ಒಂದು ಮುಖ್ಯ ಪಾಠ, ಕುಂತಿ ಈ ವಿಷಯನ ಬಂದ್ ಭೀಮಂಗೆ ಹೇಳಿ ಪುನಃಹ ಹೇಳ್ತ್. " ಹಾರವರೇ ಈ ವಿಷಯಲಿ ಹೆದಿರಿಕೆ ಪಡ್ದು ಬ್ಯಾಡ, ನಂಗೆ ಐದ್ ಜನ ಗಂಡ್ ಮಕ್ಕ ಒಳೊ. ಅವರ್ಲಿ ಯಾರನ್ನಾರ್ ಆ ರಾಕ್ಷಸನ ಹಕ್ಕಲೆ ಕಳ್ಸನೆ. ಈ ಮಾತ್‌ನ ಹಾರವ ಕೇಳಿ ಆಶ್ಚರ್ಯಂದ ಮ್ಯಾಲೆ ಹಾರಿ ದುಃಖಂದ ತಲೆ ಆಡಿಸಿತ್. ಕುಂತಿ ಹೇಳ್, ಹಾರವರೇ ನೀವೇನ್ ಹೆದ್ರ್‌ಬಡಿ ನನ್ನ ಮಜ್ಣ ಮಂತ್ರದ ಶಕ್ತಿಂದ ಅವಂಗೆ ತುಂಬಾ ಬಲ ಬಂದದೆ. ಅಂವ ರಾಕ್ಷಸನ ಕೊಂದ್ ಹಾಕಿದೆ. ಆದರೆ ಅಂವನ ಮಂತ್ರದ ಶಕ್ತಿನ ಯಾರಿಗೂ ಹೇಳಿಕ್ಕಾಗದ್, ಯಾರಿಗಾದರ್ ಹೇಳ್ದ್‌ರೆ ಆ ಶಕ್ತಿ ಕುಂಠಿತಾದೆ.

ಭೀಮ ಹಿಂಗೆ ಬಕಾಸುರ ರಾಕ್ಷಸನ ಕೊಂದರೆ, ಕೊಂದ ಸುದ್ದಿ ದುರ್ಯೋಧನನ ಜನಿಕ್ಕೆ ಗೊತ್ತಾದರೆ ಪಾಂಡವರ ವಿಷಯ ಗೊತ್ತಾದೆಲೆತ ಹೇದ್ರ್‌ತ್ ಭೀಮ. ಈ ಸಂದರ್ಭನ ಗ್ಯಾನ ಮಾಡಿ, ಬಾಳ ಕುಷಿ ಆಗೋತು. ಭೀಮನ ಸಹೋದರ್‌ರ ಭಿಕ್ಷೆ ಬೇಡಿಕೆ ಹೋದವು ಮನೆಗೆ ಬಂದೊ. ಭೀಮಾ ಕುಷಿಲಿ ಇರ್ದು ಮೋಕನ ನೋಡಿ ಅಂವ ಏನೋ ಬಹಳ ದೊಡ್ಡ ಕೆಲ್ಸನ ಮಾಡಿಟ್ಟುತ ಗ್ಯಾನ ಮಾಡಿ ಕುಂತಿನ ಏನ್ ಸಂಗತಿತ ಕೇಳ್ತೊ. ಕುಂತಿ ನಡ್ದ ಸಂಗತಿನ ಹೇಳ್ತ್. ಇದೇನ್ ಈ ತೀರ್ಮಾನ, ಯೋಚಿಸದೆ ಆತುರದ ಕೆಲ್ಸ ಅಲ್ಲಾ? ನಾವು ಇಲ್ಲಿ ಬದ್‌ಕಿರ್ದು ಭೀಮನ ಶಕ್ತಿಲೂ ಮತ್ತೆ ನಾವ್ ಕಳ್ದ್ ಹೋದ ರಾಜ್ಯ ಪಡ್‌ಕಣೆಕ್‌ತ ಇರುಕಾಕನ ಹಂಗೂ ಭೀಮಾಂದಾಗಿ ನಾವ್ ಅರ್‌ಗ್‌ನ ಅರಮನೆಂದ ತಪ್ಪಿಸಿ ಕಂಡಿರ್‌ಕಾಕನ ನೀನ್ ಭೀಮನ ಜೀವನ ಈ ರೀತಿ ಕಷ್ಟಕ್ಕೆ ಸಿಕ್ಕಿಸಿರ್‌ಕ್‌ನ ನಿಂಗೆ ಯಾಕೆ ವಳ್ಳೆ ಬುದ್ಧಿ ಹೋಳ್ತ್‌ಲ್ಲೆತ ಕೇಳ್ತೊ.

ಅದ್‌ಕೆ ಕುಂತಿ ಹೇಳ್ತ್. ಮಕ್ಕಳೇ ನಾವೇ ಈ ಹಾರವರ ಮನೇಲಿ ಈಗ ಸುಮಾರ್ ವರ್ಷಂದ ಒಳೋ. ಅವು ನಮಗ್ಗೆ ಮಾಡ್ದ ಉಪಕಾರರನ ಮರೆಕಾಗದ್. ನಂಗೆ ಭೀಮನ ವೀರತನ ಗೊತ್ತುಟು. ಅಂವ ನಮ್ಮ ವಾರಣಾವತಂದ ಹೊತ್ತ್‌ಕಂಡ್ ಬಂದದ್ ಹಿಡಿಂಬಾ ರಾಕ್ಷಸನ ಕೊಂದತ್. ಅದರಿಂದ ನಾವ್ ಹಾರವಂಗೆ ಸಹಾಯ ಮಾಡ್ದು ನಮ್ಮ ಧರ್ಮ. ಆ ಊರ್‌ನ ಜನ ಹಲವಾರ್ ತರದ ಮಾಂಸದ ರುಚಿ ಆದ ಕುಡಿಯಕೆ ಇರುವ ಶರಭತ್ತ್‌ಗಳ ದಾನಿಗ. ಮೊಸುರು ತುಂಬಿದ ಪಾತ್ರೆಗ ಮತ್ತೆ ಒಳ್ಳೆ ಅಮಲೇರುವ ಕಳ್ಳ್ ಇದನ್ನೆಲ್ಲಾ ಒಂದ್ ಎತ್ತ್‌ನ ಗಾಡಿಲಿ ತುಂಬಿಸಿ ತಂದೊ. ಭೀಮಾ ಆ ಗಾಡಿಲಿ ಕುದ್ದ್‌ಕಂಡ್ ರಾಕ್ಷಸ ಇರುವ ದೊಡ್ಡ ಗುಹೆ ಹತ್ರ ಬಾತ್. ಗಾಡಿ ಯಾಗೋಳು ನಿಲ್ಲುವ ಜಾಗದ ಗಂಟಿ ಬಂದ ಮ್ಯಾಲೆ ಜನ ಎಲ್ಲಾ ಹಿಂದಕ್ಕೆ ಬಂದ್ ಭೀಮನ ಒಬ್ಬನ್ನೇ ಬುಟ್ಟ್ ವಾಪಾಸ್ ಬಂದೋ.

ರಾಕ್ಷಸ ಇದ್ದ ಗುಹೆ ಹತ್ರ ಮುಳೆಗ, ಕೂದಲ್ ಬಿದ್ದಿತ್ತ್. ಅಲ್ಲಿ ಎಲ್ಲಾ ತರದ ಹುಳುಗ, ಪಿಜೀನ್‌ಗ ಇದ್ದೊ. ಭೀಮ ಅಲ್ಲಿ ಹರಿಡಿ ಹೋದ ಕೈ ಕಾಲ್ ತಲೆ ಬುರುಡೆಗಳ್ನ ನೋಡ್ತ್. ಕಾಗೆಗ ಗಿಡುಗಗ, ಹದ್ದ್‌ಗ ಈ ಆಹಾರ ಬುತ್ತಿನ ನೋಡಿ ಸುತ್ತಾ ಹಾರಾಡ್‌ತ ಇದ್ದೊ. ಭೀಮಾ ಗ್ಯಾನ ಮಾಡ್ತ್. ನಾನ್ ಈ ಆಹಾರನ್ನೆಲ್ಲಾ ತಿಂದನೆ. ಆಗ ನಂಗೆ ಹೆಚ್ಚಿನ ಶಕ್ತಿನೂ ಬಂದದೆ. ಅಲ್ಲದೆ ಈ ರಾಕ್ಷಸನ ಕೊಂದ್ ಆದ ಮ್ಯಾಲೆ ನನ್ನ ಶರೀರಕ್ಕೆ ಸೂತಕ ಆದ ಮ್ಯಾಲೆ ಇದರ್ನೆಲ್ಲಾ ತಿಂಬಕೆ ಆದುಲೆತ ಗ್ಯಾನ ಮಾಡಿ ತಿಂಬಕೆ ಸುರು ಮಾಡಿ ಎಲ್ಲಾ ಆಹಾರನ ತಿನ್ನ್‌ತ ಇರ್‌ಕನ ರಾಕ್ಷಸನ ಮೂಗಿಗೆ ಗಮ್ಮತ್. ಗಮನ ಹೋಡೆಕನ ಎಚ್ಚರ ಆಗಿ ರಾಕ್ಷಸ ಇಂವನ ನೋಡಿ ಸಿಟ್ಟ್ ನೆತ್ತೀಗೇರ್‌ತ ಸಿಟ್ಟ್‌ನ ರಬಸಲಿ ಭೀಮನ ಮ್ಯಾಲೆ ಎರಗಿಕಂಡ್ ಹೋಡಿಯಕ್ಕೆ ಬಾತ್. ಭೀಮಾ ರಾಕ್ಷಸನ ಕೈ ಹಿಡ್ದ್ ಎಳ್ದ್ ಹಾಕಿತ್ತ್. ಅಂವ ಹೋಡ್ತ್ ಇಂವ ಬದ್ದತ್ ಬಕಾಸುರಂದ ದೊಡ್ಡ ಶರೀರ ಕೆಂಪ್ ಮೀಸೆ, ಗಡ್ಡ ತಲೆ ಕೂದಲ್ ಕೆಮಿಂದ ಕೆಮಿ ತನಕದ ದೊಡ್ಡ ಬಾಯಿ, ಇದನ್ನೆಲ್ಲಾ ನೋಡಿ ಭೀಮಾ ನೆಗಾಡಿಕಂಡ್ ರಾಕ್ಷಸನ ಕಡೆ ಬೆನ್ನ್ ಹಾಕಿ ತಿನ್ನ್‌ದರ ಮುಂದ್‌ವರಿಸಿತ್ತ್. ರಾಕ್ಷಸ ಒಂದ್ ಮರನ ಬೇರ್ ಸಮೇತ ಕಿತ್ತ್ ಭೀಮನ ಮ್ಯಾಲೆ ಬಿಸಾಕಿತ್. ಆ ಮರನ ಭೀಮ ಎಡಗೈಲಿ ನೂಕಿ ಪುನಃಹ ತಿನ್ನ್‌ತಿತ್ತ್. ಮೊಸುರು ಪೂರ್ತಿ ಕುಡ್ದ್ ಅನ್ನ ಎಲ್ಲಾ ಖಾಲಿ ಆದ ಮ್ಯಾಲೆ ತೃಪ್ತಿಂದ ಎದ್ದತ್.

ಭೀಮಾ ರಾಕ್ಷಸನೊಟ್ಟಿಗೆ ಕಾದಾಡಿ ರಾಕ್ಷಸನ ಅಡಿಗೆ ಬೀಳ್ಸಿತ್. ಗೊಂಬೆನ ಮ್ಯಾಲೆ ಕೆಳಗೆ ಹಾಕಿ ಆಟ ಆಡುವಂಗೆ ರಾಕ್ಷಸನ ಮಾಡ್ತ್. ಕಡೇಗೆ ರಾಕ್ಷಸನ ಕಂಕಣೆ ಮಲ್ಗ್‌ಸಿ ಭೀಮ ಮಂಡಿಂದ ಬಕಾಸುರನ ಬೆನ್ ಮುರಿವಂಗೆ ಗುದ್ದಿ ಅವನ ಬೆನ್ನ್ ಮೂಳೇನಾ ಮುರ್ದದೆ. ರಾಕ್ಷಸ ಬ್ಯಾನೆಲಿ ಜೋರಾಗಿ ಕಿರ್‌ಚಾಡಿಕಂಡ್ ಎಳಿಕಾಗದೆ ಬೊಬ್ಬೆ ಹಾಕಂಡ್, ರಕ್ತ ಕಾರಿಕಂಡ್ ರಕ್ತ ಜೋರಾಗಿ ಹರ್ದ್ ಬಂದ್, ಏಗರಿಕಂಡ್ ನಿಗಿರಿಕಂಡ್ ಹರ್ಕಂಡ್ ಕಡೇಗೆ ಸತ್ತತ್. ಭೀಮಾ ವಾಪಾಸ್ ಹಾರವನ ಮನೆಗೆ ಬಂದ್ ಮೀದ್ ಸ್ವಲ್ಪ ಸುಧಾರ್ಸಿಕ್ಕಂಡ್ ನಡ್ದ ಕತೆನ ಅವನ ಅವ್ವಂಗೆ ಹೇಳ್ತ್. ಅವ್ವ ಕುಂತಿಗೆ ಮಂಜ್ನನ ಬಲ, ಭೀಮಾನ ಬಲನ ಕಂಡ್, ಭೀಮ ಶಕ್ತಿ ಅದ್ಭುತತ್ತೇಳಿ ಗ್ಯಾನ ಮಾಡ್ತ್. ಅವಳ ಕಂಣ್‌ದ ಆನಂದಬಾಷ್ಪ ಉಕ್ಕಿ ಬಾತ್.

-ಮುಂದುವರ್ದದೆ (ದ್ರೌಪದಿ ಸ್ವಯಂವರ)

ಪ್ರೊ|| ಪೂಜಾರಿ ಮೊಣ್ಣಪ್ಪ

ಸ್ನೇಹ, ಪ್ರೀತಿ, ವಿಶ್ವಾಸ ಬದುಕಿನ ಅಮೂಲ್ಯ ನಿಧಿ.



ದಿ. ಬಾರಿಕೆ ಪೂಣಚ್ಚ

ಜನನ : 6-6-1935 ಮರಣ : 9-7-2001

# ತೃತೀಯ ವಾರ್ಷಿಕ ಪುಣ್ಯ ಸ್ಮರಣೆ

ನೀವು ನಮ್ಮನ್ನು ಅಗಲಿ ಮೂರು ವರ್ಷ ಕಳೆದರೂ ನಿಮ್ಮ ಪ್ರೀತಿ, ವಿಶ್ವಾಸ, ಸ್ನೇಹಮಯ ಆದರ್ಶ ಜೀವನದ ಆ ಸವಿ ನೆನಪು ಆಗಿಂದಾಗ್ಗೆ ಮರುಕಳಿಸುತ್ತಿರುತ್ತದೆ. ನಿಮ್ಮ ಆ ದಿವ್ಯಾತ್ಮವು ಸದಾ ಚಿರಶಾಂತಿಯಿಂದ ಇರಲೆಂದು ನಾವೆಲ್ಲರೂ ಪ್ರಾರ್ಥಿಸುತ್ತಿರುವೆವು.

ಪತ್ನಿ : ಬಾರಿಕೆ ಮೀನಾಕ್ಷಿ, ಮಗ : ದಿನೇಶ್ ಕುಮಾರ್, ಮಗಳು : ಲತಾ

ಸೊಸೆ: ಕೀರ್ತಿ, ಅಳಿಯ : ಪ್ರಸನ್ನ, ಮೊಮ್ಮಕ್ಕಳು : ಪ್ರಜ್ವಲ್, ಸ್ಪಂದನ, ಮಹೇಶ್ ಗಣಪತಿ

ಹಾಗೂ ಅಪಾರಬಂಧು ಬಳಗದವರು. ಮಡಿಕೇರಿ Phone : 229219

ವಿಳಾಸ : ಗುರುಕೃಪಾ, ಹೊಸ ಕೈಗಾರಿಕೆ ಬಡಾವಣೆ, ಮಡಿಕೇರಿ.

# ಓದುಗರಲ್ಲಿ ಹಿತೈಷಿಗಳಲ್ಲಿ ಸಣ್ಣ ನಮ್ರ ವಿನಂತಿ

ನಾನು, ಪಟ್ಟಡ ಪ್ರಭಾಕರ, ಕೊಡಗು ಸಂಗಾತಿ ಪತ್ರಿಕೆಯನ್ನು ಸ್ವಾರ್ಥ ಬಯಸದೆ ಜನಾಂಗದ ಮತ್ತು ನಾಡಿನ ಹಿತವನ್ನು ಬಯಸಿ 1-4-1997 ರಲ್ಲಿ ಮೈಸೂರಿನಲ್ಲಿ ಹುಟ್ಟು ಹಾಕಿ ಸಾಕಷ್ಟು ಕೆಲಸಗಳನ್ನು ಮಾಡಿರುವುದು ಸ್ಪಷ್ಟ. ಹಲವರ ಸಹಕಾರ, ಹಿತೈಷಿಗಳ ನೆರವಿನಿಂದ, ಓದುಗರ ಅಭಿಮಾನದಿಂದ ಈ ತನಕ ನಡೆಯಿಸಲು ಸಾಧ್ಯವಾಯಿತು. ಈ ಎಂಟು ವರ್ಷಗಳ ಅವಧಿಯಲ್ಲಿ ಹಲವು ಎಡರು ತೊಡರುಗಳ ಮಧ್ಯೆ ಏಕಾಂಗಿಯಾಗಿ ಪತ್ರಿಕೆಗೆ ಓಡಾಡುವ ಅನಿವಾರ್ಯ ಪರಿಸ್ಥಿತಿ ಎದುರು ಬಂತು. ಪತ್ರಿಕೆ ಯಾವುದೇ ತೊಂದರೆ ಇಲ್ಲದೆ ಬೆಳೆಯುತ್ತಿದೆ. ಪತ್ರಿಕೆಗೆ ಸುಮಾರು 4 ಲಕ್ಷಕ್ಕಿಂತಲೂ ಹೆಚ್ಚಿನ ಹಣವು ಬಾಕಿ ಬರಲಿಕ್ಕಿದೆ. ಚಂದ ವಸೂಲಾತಿಗಾಗಿ ಪ್ರತಿಯೊಬ್ಬರ ಮನೆ ಬಾಗಿಲಿಗೆ ಹೋಗಿ ವಸೂಲು ಮಾಡವುದು ಬಹುತ್ರಾಸಕರ ಮತ್ತು ಆಗದ ಕೆಲಸ. ನಮ್ಮ ಪ್ರತಿನಿಧಿಗಳಿಗೆ ಹಣ ನೀಡದೆ ಇರುವಾಗ ನಾನೇ ಖುದ್ದು ವಸೂಲು ಮಾಡುವುದು ಅನಿವಾರ್ಯ ಪರಿಸ್ಥಿತಿ ಬಹು ದುಃಖದ ಸಂಗತಿ. ಒಂದು ವರ್ಷದಿಂದ ಈಚೆ ವೈಯಕ್ತಿಕವಾಗಿ ನಾನು ಆರೋಗ್ಯವಾಗಿಲ್ಲ. ಸಕ್ಕರೆ ಕಾಯಿಲೆ, ಬಿ. ಪಿ., ಕುತ್ತಿಗೆನೋವು, ಇವುಗಳಿಂದ ಬಳಲುತ್ತಿರುವೆನು. ನನ್ನ ಓಡಾಟಗಳಿಗೆ ವೈದ್ಯರು ಕಡಿವಾಣ ಹಾಕಿದ್ದಾರೆ. ಬೆಡ್ ರೆಸ್ಟ್‌ಗೆ ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ನನಗೆ ಏನು ಮಾಡಲು ತೋಚುತ್ತಿಲ್ಲವಾದ್ದರಿಂದ ನನ್ನ ಪ್ರೀತಿಯ ಓದುಗರಿಂದಲೂ, ಹಿತೈಷಿಗಳಿಂದಲೂ, ಗೌಡ ಸಮಾಜ, ಗೌಡ ಸಂಘ ಸಂಸ್ಥೆಗಳಿಂದಲೂ, ಗೌಡ ಬಂಧುಗಳಿಂದಲೂ, ನಾಡಿನ ಎಲ್ಲಾ ವರ್ಗದವರಿಂದಲೂ ಸಹಕಾರವನ್ನು ನಿರೀಕ್ಷಿಸುತ್ತಿರುವೇನು.

ಬಾಕಿ ನೀಡಲಿರುವ ನಮ್ಮ ಸದಸ್ಯರಿಗೆ ಸಾಕಷ್ಟು ಬಾರಿ ಜ್ಞಾಪನ ಪತ್ರ ಕಳಿಸಿದ್ದೇವೆ. ಪತ್ರಿಕೆ ಹಾಲಿ ಬರುತ್ತಲಿದ್ದು ಸಹ ಪತ್ರಿಕೆಗೆ ಸಂದಾಯವಾಗಬೇಕಿದ್ದ ಹಣವನ್ನು ಸನ್ಮಾನ್ಯ ಚಂದದಾರರು ಈ ಕೂಡಲೇ ಕಳುಹಿಸಿಕೊಟ್ಟಲ್ಲಿ ಹಲವು ಸಮಯದವರೆಗಾದರೂ ಪತ್ರಿಕೆಯನ್ನು ನಡೆಯಿಸಿಕೊಂಡು ಹೋಗಬಹುದು. ಪತ್ರಿಕೆಯ ಅಭಿವೃದ್ಧಿ ಖಂಡಿತ ಆಗಬೇಕು. ಒಂದು ಜನಾಂಗದ ಅಭಿವೃದ್ಧಿಯೇ ಒಂದು ದೇಶದ ಪ್ರಗತಿಯೆನ್ನುವ ವಾಕ್ಯದಲ್ಲಿ ನನಗೆ ಪೂರ್ಣ ನಂಬಿಕೆ ಇದೆ. ಜಡತ್ವವಿರುವ, ಜಿಜ್ಞಾಸೆಯಿರುವ, ಕ್ರಾಂತಿ ಇರದ, ಸೋಮಾರಿತನವಿರುವ, ದ್ವೇಷ, ಮತ್ಸರ, ಕಾಲೆಳೆಯುವ ಪ್ರವೃತ್ತಿ ಇರುವ, ಸ್ವಾರ್ಥ ವಿರುವಂತಹ ಯಾವುದೇ ಒಂದು ಸಮಾಜ ಅಭಿವೃದ್ಧಿ ಹೊಂದುವುದು ಖಂಡಿತ ಸಾಧ್ಯವಿಲ್ಲ.

ಸಲಹೆ, ಸೂಚನೆ, ಸಹಕಾರ ನೀಡುವ ಪತ್ರಿಕೆಯ ಸನ್ಮಾನ್ಯ ಹಿತೈಷಿಗಳೂ ಈ ಕೂಡಲೇ ತಮ್ಮ ಅಭಿಪ್ರಾಯವನ್ನು ದಿನಾಂಕ 25-7-2004 ರೊಳಗೆ ರವಾನಿಸಬೇಕಾಗಿ ಕಳಕಳಿಯ ಪ್ರಾರ್ಥನೆ. ನವೀಕರಣ ಮುಂದುವರಿಯಲಿ, ಹಾಗೆಯೇ ಇನ್ನು ಮುಂದೆ 6 ತಿಂಗಳಿಗೂ ಹೆಚ್ಚು ಬಾಕಿ ಇರುವ ಚಂದದಾರರಿಗೆ ಪತ್ರಿಕೆಯನ್ನು ನಿಲ್ಲಿಸಲಾಗುವುದು. ಸಹಕಾರ ಮುಖ್ಯ.

- ಪಟ್ಟಡ ಪ್ರಭಾಕರ, ಗೌರವ ಸಂಪಾದಕ, ಕೊಡಗು ಸಂಗಾತಿ, ಪಾಕ್ಷಿಕ ಪತ್ರಿಕೆ, 12058, ವಿಜಯನಗರ 4 ನೇ ಹಂತ, 2 ನೇ ಘಟಕ, ಹಿನಕಲ್ ಅಂಚೆ, ಮೈಸೂರು - 570 017 Phone : 0821/2404290



ದಿ. ಅಂಚೆಮನೆ ಚಿಣ್ಣಮ್ಮ

ಅಭ್ಯತ್ ಮಂಗಲ

ಮರಣ : 27-6-1999

# 5ನೇ ವರ್ಷದ ಚಿರಸ್ಮರಣೆ

ನೀವು ನಮ್ಮನ್ನಗಲಿ 5 ವರ್ಷಗಳು ಕಳೆದರೂ, ನಿಮ್ಮ ಸವಿ ನೆನಪು ಆಗಿಂದಾಗ್ಗೆ ಮರುಕಳಿಸುತ್ತಿದೆ. ನಿಮ್ಮ ಗುಣ, ಪ್ರೀತಿ ವಾತ್ಸಲ್ಯ, ತ್ಯಾಗದ ಆದರ್ಶ ಜೀವನ ನಮಗೆ ಅನು ದಿನವು ಮಾರ್ಗದರ್ಶನವಾಗಿದೆ. ನಿಮ್ಮ ನಿಷ್ಕಲ್ಮಶ ದಿವ್ಯಾತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ನೀಡಲೆಂದು ಅನುದಿನವು ನಾವು ಪ್ರಾರ್ಥಿಸುವೆವು.

ಮಕ್ಕಳು, ಮೊಮ್ಮಕ್ಕಳು, ಅಳಿಯಂದಿರು, ಸೊಸೆಯಂದಿರು

ಹಾಗೂ ಅಪಾರ ಬಂಧು ಬಳಗದವರು,

ಪ್ರಕಟಣೆ: ಅಂಚೆಮನೆ ಗಣೇಶ್, ಮೈಸೂರು 0821-2496246

Reg. No. KA/SK/MYS/88/2003 - 05 RNI No. : 10-01-96 TCI Kar. 09592

# THE CIVIL SERVICE EXAMINATION, 2005

Dear Aspirants

Here we have started new information which are benifitated to those candidates who are go to appear in civil services examination.

The civil Services examination (CSE) is conducted every year by the union public Service Commission (UPSC) as a common examination for various services like the IAS, IFS, IPS, Group A and Group B Central Services. The notification for the examination, (giving rules and the syllabus for all subjects included on the exam) is published in the month of Nov/Dec every year in Employment News / Rozgar Samachar and Gazette of India as well as in some news papers. All students are advised to get a copy of this notification from the employment News and other publications.

The Civil Services Examination civil consists of

a) Civil Services preliminary examination (Objective type) for the Selection of condidates to the Main Examination.
b) Civil Services main examination (written) and
c) Interview

## SCHEME OF EXAMINATION

**1) Preliminary :**

The preliminary examination civil have two papers of objective (Multiple choice) type questions, and carries a maximum of 450 marks. Paper I (General Studies)- will carry 150 marks and paper II (one subject to be selected from the prescribed list of optional subjects) carries 300 marks. Each paper will be of two hours duration. The course content of the syllabus for the optional subjects will be of the degree level.

## SUBJECTS

Agriculture
Animal Husbandry
& Veterinaru Science
Botany
Chemistry
Civil Engineers
Commerce
Economics
Electrical Engg.
Grography
Geology
Indian History
Law
Mathematics
Mechanical. Engg.
Philosophy
Physics
Political Science
Psychology
Public Admn
Sociology
Statistics
Zoology

*Note* : Anthropology, Mangement Literature (English) are not included in the list of prelion optionals of the upsc

## ELIGIBILITY:

Qualification : Guaduation of any stream

## DATE OF EXAMINATION:

The preliminary examination is usually held by the UPSC on a sunday in the last week of May the first week of June everyear. The exact date will be published in the notification.

The Examination Centres for the preliminary examination generally are :

Agartala, Ahmedabad, Aizwal, Allahabad, Auragabad, Bangalore, Bareilly, Bhopal, Calcutta, Chandigrah, Chennai, Cochin, Delhi, Dharwar, Dispur (Guwahati), Gangtok, Hyderbad, Imphal, Itanagar, Jaipur, Jammu, Jorhat, Kochin, Lucknow, Madurai, Mumbai, Nagpur, Panaji, (Goa), Patna, Port Blair, Raipur, Ranchi, Sambalpur, Shillong, Shimla, Sringar, Tirupati, Trivendrum, Udaipur and Visakhapatnam.

Writer : **M.S. Varadaraj,** B.Sc.,
No. 497, Near Jain Bhavan, Chamaraja Mohalla, Mysore 04, Mobile : 0821 - 3110367

Contd.........

**Kodagu Sangathi** Kannada Fortnightly Edited, Published, Printed by **Pattada Sheelamani, # 12058 "Sangathi Nilaya", Vijayanagar IV Stage, II Phase, Hinkal Post, Mysore - 570017. ☎ : 0821/2404290.**
And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/2431792.